## "ಸಿದ್ಧಗಂಗಾ" ಜಿರಾಯುವಾಗಲೆಂದು

### ಪರಿಷಿ ಷಾರ್ಕೈಸಿರುವ ಆಜೀವ ಸದಸ್ಯರ ಬಳಗ

333 ಶ್ರೀ ಟಿ. ಮಲ್ಲಣ್ಣ
ಪ್ರೊ।। ಭೀಮೇಶ್ವರ ಸಿಲ್ಕ್‌ಹೌಸ್,
ಲಿಂಗ ಸೆಟ್ಟಿ, ಬೆಂಗಳೂರು-2

334 ಶ್ರೀ ಚನ್ನಬಸವಯ್ಯ. ಶಿಕ್ಷಕರು,
ಸಿದ್ಧಗಂಗಾ ರೂರಲ್ ಹೈಸ್ಕೂಲ್,
ಪುರುಷನ ಹಳ್ಳಿ,
ದೊಡ್ಡಬಳ್ಳಾಪುರ ।।ತಾ।।, ಬೆಂಗಳೂರು ಜಿಲ್ಲೆ

335 ಶ್ರೀ ಎನ್. ಎಂ. ಮಲ್ಲಿಕಾರ್ಜುನ,
ಪ್ರೊ।। ಸವರನ್ ಪೇಪರ ಮಾರ್ಟ್
ದಾವಣಗೆರೆ

336 ಶ್ರೀ ಬಿ. ಎಂ. ಗೌರಪ್ಪ, ಬಿ. ಇ
ಬಿ. ಇ. ಎಲ್ ಕಾಲೊನಿ,
ಜಾಲಹಳ್ಳಿ, ಬೆಂಗಳೂರು-13

337 ಶ್ರೀ ಆರ್. ಐ. ಕಲ್ಯಾಣ ಸೆಟ್ಟಿ. ಮರ್ಚೆಂಟ್
ಮುಧೋಳ,
ಬಿಜಾಪುರ ಜಿಲ್ಲೆ

338 ಎಸ್. ಟಿ. ಪಾಟೀಲ್
ಮುಧೋಳ್, ಬಿಜಾಪುರ ಜಿಲ್ಲೆ.

339 ಶ್ರೀ ಆರ್. ಬಿ. ಜಯ್ಯಣ್ಣ. ಶಿಕ್ಷಕರು
ಅಕ್ಕಿಪೇಟೆ. ಬೆಂಗಳೂರು-53

340 ಶ್ರೀ ಸಂಗಪ್ಪ
ಗಾಣಿಗರ ಪಾಳ್ಯ
ಬೆಂಗಳೂರು ಸೌತ್ ತಾ।।

341 ಶ್ರೀ ಬಿ. ಎಸ್. ಪರಮಶಿವಯ್ಯ
ಪ್ರಿನ್ಸಿಪಾಲ್
ಸರ್ವಜ್ಞ ಇನ್‌ಸ್ಟಿಟ್ಯೂಟ ಆಫ್ ಕಾಮರ್ಸ್
ಕಾಟನ್ ಪೇಟೆ, ಬೆಂಗಳೂರು-53

342 ಶ್ರೀ ಟಿ. ಎಸ್. ಗುರುಬಸಪ್ಪ
ಜೆಳ್ಳಿಬಸವೇಶ್ವರ ಟೆಂಪಲ್ ಸ್ಟ್ರೀಟ್,
ಬೆಂಗಳೂರು - 58

343 ಶ್ರೀ ಪಿ. ಎಸ್. ಪುಟ್ಟಶಂಕರಯ್ಯ
ವಿಜಯನಗರ ಎಕ್ಸ್‌ಟೆನ್‌ಷನ್,
ಬೆಂಗಳೂರು - 40

344 ಶ್ರೀ ಪಿ. ಪಿ. ಹುಚ್ಚವೀರಯ್ಯ
ವಿಜಯನಗರ ಎಕ್ಸ್‌ಟೆನ್‌ಷನ್,
ಬೆಂಗಳೂರು - 40

345 ಶ್ರೀ ಜೆಚ. ಎಂ. ರುಪ್ರಪ್ಪ. ಶಿಕ್ಷಕರು
ಮಾವಳ್ಳಿ,
ಬೆಂಗಳೂರು - 4

346 ಶ್ರೀ ಸಿ. ಪುಟ್ಟಣ್ಣ
ಸಿ. ಪಿ. ಎಂ. ಸೈಕಲ್ ಷಾಪ್
ಕೆ. ಆರ್. ಸರ್ಕಲ್, ಮೈಸೂರು.

347 ಶ್ರೀ ಆರ್. ಕರಿಯಪ್ಪ, ರಿ।। ಟೀಚರ್,
ಸೋಮೇನಹಳ್ಳಿ,
ಹೊಸದುರ್ಗ ।।ತಾ।। ಚಿತ್ರದುರ್ಗ ಜಿಲ್ಲೆ

348 ಶ್ರೀ ಸಿದ್ಧರಾಮಯ್ಯ
ಇಂಜಿನಿಯರ್ ಮತ್ತು ಕಂಟ್ರಾಕ್ಟರ್,
ಅಥಣಿ, ಬೆಳಗಾಂ ।।ಜಿಲ್ಲೆ।।

( ಮುಂದುವರಿಯುತ್ತವೆ )



# ಶ್ರೀವಾಣಿ

ವೇದ, ಉಪನಿಷತ್ತು, ಇತಿಹಾಸ ಕಾಲದಿಂದ ಕ್ಷಾತ್ರ ತೇಜಸ್ಸಿಗೆ ಉನ್ನತ ಸ್ಥಾನವಿತ್ತು ಗೌರವಿಸಿರುವುದು ಕಂಡು ಬರುತ್ತದೆ. ಅದಕ್ಕೆ ಹಿಂದೂ ಧರ್ಮ ಉಜ್ವಲ ಸ್ಥಾನ ಕೊಟ್ಟಿದೆ. ಆದರೆ ಬರಿ ಶೌರ್ಯ, ಪರಾಕ್ರಮ, ಸಾಹಸಗಳನ್ನು ವ್ಯಕ್ತಪಡಿಸುವ ತಂಡವೊಂದನ್ನೇ ತಯಾರಿಸಿದರೆ, ಪ್ರೋತ್ಸಾಹಿಸಿದರೆ ಅವರೆಂದಿಗೂ ಸುಖೀ ರಾಜ್ಯವನ್ನು ನಿರ್ಮಾಣ ಮಾಡಲಾರರು. ಅಂತಹವರಿಂದ ಸರ್ವಾಧಿಕಾರ ಸ್ಥಾಪನೆಯಾಗಿ ವ್ಯಕ್ತಿ ಸ್ವಾತಂತ್ರ್ಯ ಹರಣವಾಗುತ್ತದೆ. ಕ್ಷಾತ್ರ ತೇಜಸ್ಸಿಗೆ ಧರ್ಮದ ಅಂಕುಶವಿದ್ದರೆ ಮಾತ್ರ ಸುಖೀ ರಾಜ್ಯ ಸ್ಥಾಪನೆಗೆ ಅವಕಾಶವುಂಟಾಗುತ್ತದೆ.

ಇತಿಹಾಸದ ಅವಲೋಕನದಿಂದ ಒಂದು ವಿಷಯ ಸ್ಪಷ್ಟವಾಗುತ್ತದೆ. ದೇಶದ ಸಾಹಿತ್ಯ, ಸಂಸ್ಕೃತಿ, ಧರ್ಮ ಜೀವನದ ಬೆಳವಣಿಗೆ ಇವುಗಳಿಗೆ ಪವಿತ್ರ ವಾತಾವರಣ ಇರಲೇ ಬೇಕು. ದೇಶ ಶಾಂತಿಯಿಂದಿದ್ದು ಸುಗಮ ವಾತಾವರಣವಿದ್ದಾಗ ಎಲ್ಲಾ ಅಭಿವೃದ್ಧಿ ಸಾಧ್ಯವಾಗುತ್ತದೆ. ಯುದ್ಧದ ಭೀತಿಯಿದ್ದು, ಅಶಾಂತಿ ಮೂಡಿದಾಗ ಧರ್ಮ, ಸಾಹಿತ್ಯ, ಸಂಸ್ಕೃತಿ ಇವುಗಳ ಬೆಳವಣಿಗೆ ಕುಂಠಿತವಾಗುತ್ತದೆ. ಉಪನಿಷತ್ಕಾಲ ಧರ್ಮ ಪ್ರಚಾರದ ಕಾಲ. ಆಗಿನ ವಾತಾವರಣ ಬಹಳ ಪವಿತ್ರವಾಗಿತ್ತು. ಕ್ಷೋಭೆ ಇರಲಿಲ್ಲ; ಯಾವ ಸಮಸ್ಯೆಗಳೂ ಇರಲಿಲ್ಲ. ಆಗ ಆತ್ಮ ಪರಮಾತ್ಮನನ್ನು ಕುರಿತು ಚಿಂತಿಸಲು ಅನುವಿತ್ತು. ಯಾವುದೇ ಮಹತ್ಸಾಧನೆಗೂ ಪವಿತ್ರವಾದ, ಉತ್ತಮವಾದ ವಾತಾವರಣ ಅಗತ್ಯವೆಂಬುದಕ್ಕೆ ಹಿಂದಿನ ಕಾಲದ ಉತ್ಕೃಷ್ಟ ಸಾಹಿತ್ಯ, ಧರ್ಮಪ್ರಚಾರದ ಕೆಲಸ, ಪ್ರಾಚೀನ ಸಂಸ್ಕೃತಿ ಇವು ಜೀವಂತ ನಿದರ್ಶನಗಳಾಗಿವೆ.

—

# 'ಸಿದ್ಧಗಂಗಾ'

ಜುಲೈ, ೧೯೭೭

ಸಂಪುಟ–೧೩ ಸಂಚಿಕೆ–೭

ಪ್ರಕಾಶಕರು
ಹೆಚ್. ಬಿ. ಗಂಗಾಧರಯ್ಯ
ಹಳೆಯ ವಿದ್ಯಾರ್ಥಿ ಸಂಘದ ಪರವಾಗಿ

ಸಂಪಾದಕರು
ಪಂ॥ ಚನ್ನಪ್ಪ ಎರೇಸೀಮೆ
ಕೆ. ಜಿ. ರಂಗಯ್ಯ

ಜಾಹೀರಾತು ವ್ಯವಸ್ಥಾಪಕರು
ಎಂ. ರೇಣುಕಾರಾಧ್ಯ

ಮುದ್ರಕರು
ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ಮುದ್ರಣಾಲಯ

ಪ್ರಕಟನೆಯ ಸ್ಥಳ
ಶ್ರೀ ಸಿದ್ಧಗಂಗಾ ಕ್ಷೇತ್ರ

ಚಂದಾ ವಿವರ

ವಾರ್ಷಿಕ ಚಂದಾ: 10 ರೂ
ಆಜೀವ ಸದಸ್ಯತ್ವ: 101 ರೂ

## ಈ ಸಂಚಿಕೆಯಲ್ಲಿ



ಮುಖಪುಟ

ಮಹಾಮಹಿಮ ಶ್ರೀ ಉದ್ಧಾನ ಶಿವಯೋಗಿಗಳಿಂದ ಸ್ಥಾಪಿತವಾದ ಉಚಿತ ವಿದ್ಯಾರ್ಥಿನಿಲಯದ ಸುವರ್ಣ ಮಹೋತ್ಸವವು 1972 ರಲ್ಲಿ ವೈಭವದಿಂದ ನೆರವೇರಿಸಲ್ಪಟ್ಟಿತು.

### ಲೇಖಕರಲ್ಲಿ ಮನವಿ

'ಸಿದ್ಧಗಂಗಾ' ಲೇಖಕರಿಂದ ಧಾರ್ಮಿಕ, ಸಾಂಸ್ಕೃತಿಕ ಐತಿಹಾಸಿಕ ಹಾಗೂ ವೈಚಾರಿಕ ಲೇಖನಗಳು, ಸಣ್ಣಕಥೆ, ಕವನ, ಪ್ರಬಂಧ ಇವುಗಳನ್ನು ಸದಾ ಸ್ವಾಗತಿಸುತ್ತದೆ. ಲೇಖನಗಳು ಫುಲ್‌ಸ್ಕೇಪ್ ಸೈಜಿನ 3 ಪುಟಗಳಿಗೆ ಮೀರದಂತಿದ್ದು ಕಾಗದದ ಒಂದೇ ಮಗ್ಗುಲಲ್ಲಿ ಬರೆಯಲ್ಪಟ್ಟಿರಬೇಕು. ಅಸ್ವೀಕೃತ ಲೇಖನಗಳನ್ನು ಹಿಂದಿರುಗಿಸಲಾಗುವುದಿಲ್ಲ. ಸ್ವೀಕೃತ ಲೇಖನಗಳಿಗೆ 'ಸಿದ್ಧಗಂಗಾ' ಆಗ್ಗಿಂದಾಗ್ಗೆ ನಿಗದಿಪಡಿಸಿಕೊಳ್ಳುವ ಸಂಭಾವನೆಯನ್ನು ನೀಡಲಾಗುವುದು. ಲೇಖನಗಳನ್ನು

"ಸಂಪಾದಕರು"
'ಸಿದ್ಧಗಂಗಾ' [ಕನ್ನಡ ಮಾಸ ಪತ್ರಿಕೆ]
ಶ್ರೀ ಸಿದ್ಧಗಂಗಾ ಕ್ಷೇತ್ರ –572131 ತುಮಕೂರು ಜಿಲ್ಲೆ
ಇವರಿಗೆ ಕಳಿಸಿ ಕೊಡಬೇಕಾಗಿ ಪ್ರಾರ್ಥನೆ.

### ಚಂದಾದಾರರಲ್ಲಿ ಮನವಿ

ನಿಮ್ಮ ಚಂದಾ ಅವಧಿ ಮುಗಿಯುವವರೆಗೆ ವಿಳಾಸ ಬದಲಾವಣೆ ಮತ್ತು ಇತರೆ ಬಗ್ಗೆ ವ್ಯವಹರಿಸುವಾಗ ವಿಳಾಸದ ಹಿಂಬದಿ ಇರುವ ಕ್ರಮಾಂಕ ಅಥವಾ ಯಾರ ಮೂಲಕ ಸದಸ್ಯತ್ವ ಪಡೆದಿರುವಿರೋ ಆ ನಮ್ಮ ಪ್ರತಿನಿಧಿಗಳ ಹೆಸರನ್ನು ಸೂಚಿಸಿ ಪತ್ರ ಬರೆಯಿರಿ.

ಚಂದಾ ಅವಧಿ ಮುಗಿದಿರುವ ಮಾನ್ಯ ಓದುಗರು ನೂತನ ಸಾಲಿಗೆ ಮುಂದುವರಿಸಿಕೊಳ್ಳಬೇಕಾಗಿ ವಿನಂತಿ.

ಚಂದಾ ಬಾಕಿ ಇರುವವರು ಸಂದಾಯ ಮಾಡಿ 'ಸಿದ್ಧಗಂಗಾ' ಮುನ್ನಡೆಗೆ ಸಹಕರಿಸಿ.

ಪ್ರಕಾಶಕರು
'ಸಿದ್ಧಗಂಗಾ' **ಮಾಸ ಪತ್ರಿಕೆ, ಸಿದ್ಧಗಂಗಾಮಠ–572131, ತುಮಕೂರು ಜಿಲ್ಲೆ**

# ನವನೀತ

( ಸಂಸ್ಕೃತ ಶ್ಲೋಕಗಳ ಭಾವಾನುವಾದ )

**ಕಾವ್ಯಶಾಸ್ತ್ರವಿನೋದೇನ ಕಾಲೋ ಗಚ್ಛತಿ ಧೀಮತಾಮ್ ।**
**ವ್ಯಸನೇನ ಚ ಮೂರ್ಖಾಣಾಂ ನಿದ್ರಯಾ ಕಲಹೇನ ವಾ ॥**

ಗ್ರಂಥಗಳ ಪಠಣದಲಿ, ಸಂತೋಷದಲ್ಲಿ
ಉರುಳುವುದು ಮತಿವಂತ ಜನರ ಸಮಯ
ದುಗುಡದಲಿ, ನಿದ್ದೆಯಲಿ, ಜಗಳದಲ್ಲಿ
ಕಳೆಯುವುದು ಮತಿಹೀನ ಜನರ ಸಮಯ

❀ ❀ ❀

**ಉತ್ತಮೋ ನಾತಿ ವಕ್ತಾಸ್ಯಾದಧಮೋ ಬಹುಭಾಷಕಃ ।**
**ನಹಿ ಸ್ವರ್ಣೇ ಧ್ವನಿಸ್ತಾದೃಗ್ಯಾದೃಕ್ಕಾಂಸ್ಯೇ ಪ್ರಜಾಯತೇ ॥**

ಮಿತಭಾಷಿಯುತ್ತಮನು ಲೋಕದೊಳು ತಾನು
ಬಡಬಡಿಸುವವನು ಅಧಮ ವಾಚಾಳಿಯಿವನು
ಚಿನ್ನದಿಂದಾದ ಕೊಡ ಕೊಡದ ದನಿಯನ್ನು
ಕಂಚು ಹೊರಗೆಡಹುವುದು ಕಿಂಕಿಣಿಯನು

❀ ❀ ❀

**ಉದಯೇ ಸವಿತಾರಕ್ತಃ ರಕ್ತಶ್ಚಾಸ್ತಮನೇ ತಥಾ ।**
**ಸಂಪತ್ತೌ ಚ ವಿಪತ್ತೌ ಚ ಮಹತಾಮೇಕರೂಪತಾ ॥**

ಕೆಂಬಣ್ಣ ಸೂಸುವನು ಉದಯಿಸುವ ಭಾನು
ಉಗುಳುವನು ಮುಳುಗುತಿರೆ ಅದೆ ಬಣ್ಣವನ್ನು
ಸಂಪತ್ತು ತಾನಿರಲಿ, ಆಪತ್ತೆ ಬರಲಿ
ದೊಡ್ಡವರ ಗುಣವೊಂದೆ ಲೋಕದಲ್ಲಿ

"ಕಾವ್ಯಸುಧಾಪ್ರಿಯ"

❀ ❀ ❀ ❀

## ಅಮೃತ ಬಿಂದು

"ಕಾಲಾಯ ತಸ್ಮೈ ನಮಃ"

ಎನ್ನುವ ಆರ್ಯೋಕ್ತಿಯಂತೆ ಕಾಲಚಕ್ರದ ಸುಳಿಯಲ್ಲಿ ಎಲ್ಲವೂ ಏರುಪೇರು. ಅಂತೆಯೇ ಕೌಟುಂಬಿಕ ಜೀವನದ ಸಮಸ್ಯೆಗಳು ಹಿಂದಿಗಿಂತಲೂ ಇಂದು ಬಿಡಿಸಲಾಗದಷ್ಟು ಬಿಗಡಾಯಿಸಿವೆ. ಕುಟುಂಬದಲ್ಲಿರುವ ಎಲ್ಲರೂ ನೆರೆಹೊರೆ ಹಾಗು ಸಮಾಜ ಇದಕ್ಕೆ ಕಾರಣ ಕುಟುಂಬದ ವ್ಯಕ್ತಿಗಳೆಂದರೆ ಪತಿ-ಪತ್ನಿ ಮಕ್ಕಳು ಇತ್ಯಾದಿ. ಕಾಲಸ್ಥಿತಿಗೆ ತಕ್ಕಂತೆ ಬೇಕು ಬೇಡಗಳು ಆಸೆ ಅನಿಸಿಕೆಗಳು ಹತ್ತು ಹಲವು. ಅವುಗಳ ಪೂರೈಕೆಗೆ ಆರ್ಥಿಕ ಸಮಸ್ಯೆ ಬೃಹದಾಕಾರವಾಗಿ ನಿಲ್ಲುತ್ತದೆ. ಹಾಸಿಗೆಯಿದ್ದಷ್ಟು ಕಾಲು ಚಾಚು ಎನ್ನುವ ನಾಣ್ನುಡಿಯು ಎಚ್ಚರಿಕೆಯನ್ನು ಕೊಡುತ್ತಿದ್ದರೂ ನೆರೆಹೊರೆಯವರ ಪ್ರಭಾವ ಕೌಟುಂಬಿಕ ಜೀವನದ ವಿರಸಕ್ಕೆ ಅವಕಾಶ ಮಾಡಿಕೊಡುತ್ತದೆ. ಈ ವಿರಸ ರಸವಂತಿಕೆಯನ್ನು ಪಡೆಯಬೇಕಾದರೆ ಸಕಾಲಿಕ ಅರಿವು ಅತ್ಯಗತ್ಯ. ತಿಳಿವಿನ ಬೆಳಕಿನಲ್ಲಿ ನಡೆಯದಿದ್ದರೆ ಬದುಕು ಬೇಸರಕ್ಕಿಟ್ಟುಕೊಳ್ಳುತ್ತದೆ. ಸುಖ ಸಮೃದ್ಧಿಯಿಂದ ಸಾಗಬೇಕಾದ ಕೌಟುಂಬಿಕ ಜೀವನ ನರಕ ಸದೃಶವಾಗುತ್ತದೆ. ಇದನ್ನು ಕಂಡೇ ಸರ್ವಜ್ಞನಂಥ ಅನುಭವಿಕ ಕವಿ ಹೀಗಂದಿದ್ದಾನೆ.

ಬೆಚ್ಚನೆ ಮನೆಯಾಗಿ। ವೆಚ್ಚಕ್ಕೆ ಹೊನ್ನಾಗಿ
ಇಚ್ಛೆಯನ್ನರಿವ ಸತಿಯಿರಲು ಸ್ವರ್ಗಕ್ಕೆ ।
ಕಿಚ್ಚು ಹಚ್ಚೆಂದ ಸರ್ವಜ್ಞ ॥

ಪತಿಯ ಇಂಗಿತವನ್ನರಿತ ಸತಿ ಇರುವಾಗ ಎಂತೆಂತಹ ಸಮಸ್ಯೆಗಳೂ ಸುಖ ಸಮೃದ್ಧ ಕೌಟುಂಬಿಕ ಜೀವನಕ್ಕೆ ಭಂಗ ತರಲಾರವು. ಇರುವ ನೆಲೆ, ನಿಂತ ಪರಿಸರ ಪರಿಶುದ್ಧವಾಗಿರುತ್ತದೆ. ಆ ಕೌಟುಂಬಿಕ ಜೀವನ ಆದರ್ಶಮಯವಾಗಿ, ಸ್ವರ್ಗ ಸುಖ ಸಂತೋಷದ ನೆಲೆವೀಡಾಗುವುದರಲ್ಲಿ ಎಳ್ಳಷ್ಟೂ ಸಂಶಯವಿಲ್ಲ. —'ದುಂಬಿ'

# ಶ್ರೀ ಶ್ರೀ ಉದ್ದಾನೇಶ್ವರ ಶಿವಯೋಗಿಗಳು.

ಡಾ॥ ಟಿ. ಜಿ. ಸಿದ್ದಪ್ಪಾರಾಧ್ಯ

**ಸುಕ್ಷೇತ್ರ ಸಿದ್ಧಗಂಗೆಯ ಗುರುಪರಂಪರೆಯಲ್ಲಿ ಈ ಹಿಂದೆ ಬೆಳಗಿದ ಜಂಗಮಜ್ಯೋತಿ ಗುರು ಉದ್ದಾನೇಶ್ವರ ಶಿವಯೋಗಿಗಳು ಆಗಮ ವಾಕ್ಯ ಸಾರುವಂತೆ ಜಂಗಮ-ಜಗದೀಶ್ವರರಾಗಿದ್ದರು. ಅವರ ತಪಸ್ಸಿದ್ಧಿಯ ಪುಣ್ಯಸಲಿಲದಲ್ಲಿ ಮಿಂದು ಪುನೀತರಾದವರೇ ಧನ್ಯರು.**

ಶ್ರೀ ಸಿದ್ಧಗಂಗಾಮಠದ ಅಧ್ಯಕ್ಷರಾಗಿದ್ದ ಉದ್ದಾನೇಶ್ವರ ಶಿವಯೋಗಿಗಳ ಶಿಷ್ಯರಲ್ಲಿ ನಾನೊಬ್ಬನು. ಅವರಿಗೆ ಅತ್ಯಂತ ಪ್ರಿಯ ಶಿಷ್ಯನೂ ಆಗಿದ್ದೆನು. ನನ್ನಿಂದ ಹೆಚ್ಚಿನ ಲೋಕ ಕಲ್ಯಾಣವಾಗಲೆಂದು ಅವರು ನನ್ನನ್ನು ಪದೇ ಪದೇ ಹರಸುತ್ತಲೂ ಇದ್ದರು. ಆಗಿನ ಮಠದ ವಿದ್ಯಾರ್ಥಿಗಳಲ್ಲಿ ನಾನು ಹೆಚ್ಚು ಉತ್ಸಾಹದಿಂದ ಸಂಸ್ಕೃತವನ್ನು ಓದುತ್ತಿದ್ದುದರಿಂದ ಅವರು ನನ್ನಲ್ಲಿ ಹೆಚ್ಚು ವಾತ್ಸಲ್ಯಾನುಗ್ರಹಗಳನ್ನಿಟ್ಟು ಆಶೀರ್ವದಿಸುತ್ತಿದ್ದರು. ಅವರಿಗೆ ಮಧ್ಯಾಹ್ನ ಕಾಲದ ಶಿವಪೂಜೆಗೂ ಅರ್ಪಣಕ್ಕೂ ಸೇವೆಯನ್ನು ಸಲ್ಲಿಸುವ ಅವಕಾಶ ನನಗೆ ಒದಗಿತ್ತು. ಅವರ ಶಿವಯೋಗದ ಮಹತ್ವವನ್ನು ನಾನು ಕಣ್ಣಾರೆ ಕಂಡು ಅನುಭವಿಸುವ ಸುಯೋಗವೂ ನನಗೆ ದೊರೆತಿತ್ತು. ಅವರು ಶಿವಪೂಜೆಗೆ ಕುಳಿತು ಆರಂಭದಲ್ಲಿ ಪ್ರಾಣಾಯಮವನ್ನು ಮಾಡುವಾಗ ಅವರ ಆತ್ಮವು ಜ್ಯೋತಿರ್ಮಯವಾದ ಶರೀರದಲ್ಲಿ ಪ್ರಾಕೃತ ಶರೀರದಿಂದ ಮೇಲಕ್ಕೆ ಏರುತ್ತಿದ್ದುದನ್ನು ನಾನು ಕಣ್ಣಾರೆ ಕಂಡು ಸಂತೋಷಪಡುತ್ತಿದ್ದೆನು. ಅವರು ಯೋಗದಲ್ಲಿ ಚೆನ್ನಾಗಿ ನುರಿತ್ತಿದ್ದರು. ಹಿಂದಿನ ಜನ್ಮದಲ್ಲಿ ಸಾಕಷ್ಟು ದುಡಿದಿದ್ದುದರಿಂದ ಆಸನದಲ್ಲಿ ಕುಳಿತೊಡನೆ ಪ್ರಾಣವಾಯುವನ್ನು ನಿರೋಧಿಸಿ ಬ್ರಹ್ಮಸ್ಥಾನದಲ್ಲಿ ನಿಲ್ಲಿಸಿ ಆ ಮೂಲಕ ಕೊಂಚ ಮೇಲೆ ಏರುತ್ತಿದ್ದರು. ಮೇಲೆ ಏರಿದ ಆತ್ಮಜ್ಯೋತಿಯ ನೆರಳನ್ನು ನಿರ್ಮಲ ಹೃದಯದ ಸದ್ಭಕ್ತರು ಕಾಣಬಹುದಾಗಿತ್ತು. ಆಗ ಮೈಯೆಲ್ಲಾ ಜಡವಾಗಿರುತ್ತಿತ್ತು. ನನಗೆ ಆಗ ಆತ್ಮದ ಅನುಭವವಿಲ್ಲದಿದ್ದರೂ ಅವರ ಆತ್ಮಶಕ್ತಿಯ ಪ್ರಸಾರವನ್ನು ತಿಳಿದುಕೊಳ್ಳುವ ಸ್ಥಿತಿ ಇತ್ತು. ಈಚೆಗೆ ಜೈನಧರ್ಮದಲ್ಲಿ ಆತ್ಮದ ಊರ್ಧ್ವಗಮನವನ್ನು ಇಂದ್ರಾದಿ ದೇವತೆಗಳು ಬಂದು ಆತ್ಮಕ್ಕೆ ಪೀಠವನ್ನು ಏರ್ಪಡಿಸುವ "ಸಮವಸರಣ" ಮಹೋತ್ಸವವನ್ನು ತಿಳಿದ ಮೇಲೆ ಶ್ರೀಗಳು ತೀರ್ಥಂಕರರಂತೆ ಊರ್ಧ್ವದೃಷ್ಟಿಯ "ಸಮವಸರಣ" ಮಹೋತ್ಸವವನ್ನು ಸಹಜವಾಗಿ ನಿತ್ಯವೂ ಸ್ವತಃ ಏರ್ಪಡಿಸಿಕೊಳ್ಳುತ್ತಿದ್ದರೆಂಬ ಅಂಶ ನನಗೆ ಅನುಭವಕ್ಕೆ ಬಂದಿತು.

ಈ ಬಗೆಯ ಶಿವಯೋಗದ ನಿತ್ಯಾನಂದವನ್ನು ಅವರು ಶಿವಪೂಜಾಕಾಲದಲ್ಲಿ ಅನುಭವಿಸುತ್ತಿದುದಷ್ಟೇ ಅಲ್ಲದೆ ನಿತ್ಯ ವ್ಯವಹಾರಗಳನ್ನು ನಡೆಸುವ ಕಾಲದಲ್ಲೂ ಅವರ ಗಮನವೆಲ್ಲವೂ ಊರ್ಧ್ವದೃಷ್ಟಿಯಲ್ಲಿಯೇ ಅಂಟಿಕೊಂಡಿತ್ತು. ಮಠದ ದಾಸೋಹಕ್ಕೆ ಏನಾದರೂ ಕೊರತೆ ಬಂದಾಗ ಶಿವನು ನಡೆಸುವನೆಂದು ಸಮಾಧಾನವನ್ನು ಹೇಳುತ್ತಿದ್ದರು. ಅವರ ಅಮೃತವಾಣಿ ಹೊರಟ ಮರುಕ್ಷಣವೇ ಆ ಕೊರತೆ ಪರಿಹಾರವಾಗುತ್ತಿತ್ತು. ಅಕ್ಕಿ ಇಲ್ಲವಾಗಿದ್ದರೆ ಬರುತ್ತಿತ್ತು. ಸೌದೆ ಇಲ್ಲವಾಗಿದ್ದರೆ ಬರುತ್ತಿತ್ತು. ಎಲ್ಲಿಂದ ಹೇಗೆ ಬರುತ್ತದೆ ಎಂಬುದನ್ನು ಅವರು ಚಿಂತಿಸುತ್ತಲೇ ಇರಲಿಲ್ಲ. ನಿಜವಾಗಿಯೂ ಅವರು ನಿರಂಜನಸ್ಥಿತಿಯ ಪ್ರಕೃತಿ ಅನುಭವವನ್ನು ನಿತ್ಯ ಜೀವನದಲ್ಲಿ ಅಳವಡಿಸಿಕೊಂಡಿದ್ದರು. ಅವರ ಸ್ಥಿತಿಯನ್ನು ನಿರ್ಮಲ ಮನೋಭಾವದಿಂದ ಪರಿಶೀಲಿಸಿದವರಿಗೆ ಅವರು ಉತ್ತಮ ಸಂಸ್ಕಾರದಿಂದ ಆವಿರ್ಭವಿಸಿ ಅನಾಯಾಸವಾಗಿ ಆತ್ಮಶಕ್ತಿಯ ವಿಕಾಸವನ್ನು ಪಡೆದು ನಿರ್ಲಿಪ್ತ ಜೀವನವನ್ನು ನಡೆಸುತ್ತಿದುದು ಎಲ್ಲರಿಗೂ ಅನುಭವದ ವಿಷಯವಾಗಿತ್ತು. ಅವರ ಬಾಯಲ್ಲಿ ಬಂದ ಮಾತಿಗೆ ಯಾವ ಚ್ಯುತಿಯೂ

ಇಲ್ಲದೆ ಸಾರ್ಥಕತೆಯಾಗುತ್ತಿತ್ತು. ಯಾರಿಗಾದರೂ ಶರೀರದಲ್ಲಿ ವ್ಯಥೆಯುಂಟಾಗಿದ್ದರೆ ಶ್ವಾಸೋಚ್ಛ್ವಾಸಗಳ ಪರಿಶೀಲನೆಯಿಂದಲೇ ಅದರ ಪರಿಹಾರವನ್ನು ಸೂಚಿಸುವ ಶಕ್ತಿ ಅವರಿಗೆ ಇತ್ತು. ಎಂಥಹ ವಿಷಮ ಸಮಸ್ಯೆಗಾದರೂ ಅವರಿಂದ ಸೂಕ್ತ ಪರಿಹಾರ ದೊರಕುತ್ತಿತ್ತು. ಅವರಲ್ಲಿ ಹೋಗಿ ಕಷ್ಟ-ನಷ್ಟಗಳನ್ನು ಹೇಳಿಕೊಂಡವರಿಗೆ ಅವುಗಳ ಪರಿಹಾರದ ಸೂಚನೆ ಹೊರಬಿದ್ದು ನಾಲ್ಕಾರು ದಿನಗಳಲ್ಲಿ ಅದು ಫಲಪ್ರದವಾಗುತ್ತಿತ್ತು. ಶಿವನನ್ನು ನಿರಂಜನ ಜಂಗಮನೆಂದು ಶ್ರುತ್ಯಾಗಮಗಳು ತಿಳಿಸುತ್ತವೆ. ಅಂತಹ ಶಿವನನ್ನು ಹೃದಯದಲ್ಲಿ ಮನಗಂಡು ಅವನಲ್ಲಿ ಸಮರಸವಾಗಿ ಬೆರೆತು ನಿರ್ಲಿಪ್ತತೆಯಿಂದ ಎಲ್ಲ ವ್ಯವಹಾರಗಳನ್ನೂ ಶಾಂತಿ ಸಮಾಧಾನಗಳಿಂದ ನಿರ್ವಹಿಸುತ್ತಿದ್ದ ಶ್ರೀಗಳು ನಿರಂಜನ ಜಂಗಮಮೂರ್ತಿಗಳಾಗಿದ್ದುದನ್ನು ಭಕ್ತರೆಲ್ಲರೂ ಮನಗಂಡಿದ್ದರು. ಅವರ ಸ್ಥಿತಿಯನ್ನು ನೆನೆಸಿಕೊಂಡಿಹ ನನಗೆ ಆಗಮ ವಾಕ್ಯದ ಸ್ಫೂರ್ತಿ ಈಗ ಲಭಿಸುತ್ತದೆ.

**ಆತ್ಮಾಯಂ ಕೇವಲಃ ಶುದ್ಧಃ ಶುದ್ಧೋ ನಿರಂಜನೋಭವೇತ್ ।**
**ನಿರಂಜನೋ ಜಂಗಮಃ ಸ್ಯಾತ್ ಜಂಗಮೋ ಜಗದೀಶ್ವರಃ ॥**

ಈ ಮಾತು ಉದ್ದಾನಶಿವಯೋಗಿಗಳಿಗೆ ಅಕ್ಷರಶಃ ಅನ್ವಯಿಸುತ್ತದೆ. ಅವರು ಈ ಮಾತಿನ ಅರ್ಥವನ್ನು ನನಗೆ ಆಗಾಗ ಸಹಜವಾಗಿ ತಿಳಿಸುತ್ತಿದ್ದರು. ಅವರು ಯಾವಾಗಲೂ ಹೊರಗಡೆಗೆ ಸಂಚಾರ ಹೊರಡುವಾಗ ನನ್ನನ್ನು ಜೊತೆಯಲ್ಲಿಯೇ ಕರೆದೊಯ್ಯುತ್ತಿದ್ದರು. ಅವರು ಹೀಗೆ ನನಗೆ ಹೇಳುತ್ತಿದ್ದರು-

"ಈ ಆತ್ಮವು ದೇಹ ಮನಸ್ಸುಗಳಿಗೆ ಅಂಟಿಕೊಂಡು ಅಶುದ್ಧವಾಗಿರುವುದು. ಆದರೆ ಈ ಆತ್ಮದೊಳಗೆ ನಿರ್ಲಿಪ್ತನಾಗಿ ಶಿವನಿರುವನು. ಈ ಶಿವನು ಸದಾ ಶುದ್ಧನಾಗಿರುವನು. ಈ ಶಿವನ ಚಿಂತನೆಯಿಂದ ಆತ್ಮವು ಶುದ್ಧನಾದರೆ ಕೈವಲ್ಯಾನಂದವನ್ನು ಇಲ್ಲಿಯೇ, ಈ ದೇಹದಲ್ಲಿಯೆ ಅನುಭವಿಸುವನು. ಆಗ ಅವನು ಕೇವಲನೆನಿಸುವನು. ದೇಹೇಂದ್ರಿಯಗಳಿಗೆ ಅಂಟದೆ ಶುದ್ಧನಾದ ಆತ್ಮನೇ ನಿರಂಜನ ಸ್ಥಿತಿಯ ಅನುಭವವನ್ನು ಪಡೆದು ಲೋಕದಲ್ಲಿ ತಾವರೆಯ ಎಲೆಯಂತೆ ನಿರ್ಲಿಪ್ತನಾಗಿರುವನು. ಇಂತಹ ನಿರಂಜನ ಸ್ಥಿತಿಯನ್ನು ಪಡೆದವನೇ ಪರಿಪೂರ್ಣಸ್ಥಿತಿಯನ್ನು ನಿತ್ಯ ಜೀವನದಲ್ಲಿ ಅನುಭವಿಸುತ್ತ ಜಂಗಮನೆನಿಸುವನು. ಆಗ ಅವನು ಅನಾಯಾಸವಾಗಿ ಲೋಕಕಲ್ಯಾಣವನ್ನು ನಡೆಸುತ್ತ ಈಶ್ವರನಂತೆ ಜನರ ಕಷ್ಟನಷ್ಟಗಳನ್ನು ಪರಿಹರಿಸಲು ಶಕ್ತನಾಗುವನು. ಜನರ ಸುಖಸಂತೋಷಗಳನ್ನು ಹೆಚ್ಚಿಸದೆ ಯಾವನೊಬ್ಬನೂ ನೆಮ್ಮದಿಯಿಂದ ಲೋಕದಲ್ಲಿ ಬಾಳಲಾರನು. ಜನರಿಗಾಗಿ ಬದುಕುವವನೇ ಜನ್ಮ ಸಾರ್ಥಕತೆಯನ್ನು ಪಡೆಯಬಲ್ಲನು."

ಹೀಗೆ ಅವರು ಆಗಾಗ ಹೇಳುತ್ತಿದ್ದುದು ನನಗೆ ದಿವ್ಯ ಸಂಜೀವಿನಿಯಾಗಿತ್ತು.

**"ಪರೋಪಕಾರಃ ಪುಣ್ಯಾಯ ಪಾಪಾಯ ಪರಪೀಡನಂ"**

ಎಂಬ ಮಾತು ಅವರ ಬಾಳಿನಲ್ಲಿ ಹಾಸುಹೊಕ್ಕಾಗಿ ಸೇರಿ ಕೊಂಡಿತ್ತು. ತಮ್ಮಲ್ಲಿಗೆ ಯಾರೇ ಬರಲಿ ಅವರ ದುಃಖ ವ್ಯಥೆಗಳನ್ನು ತೊಲಗಿಸಿ ಅವರಿಗೆ ಬಾಳಿನಲ್ಲಿ ಸಮಾಧಾನವನ್ನು ದೊರಕಿಸುವುದೇ ಅವರ ಬಾಳಿನ ಉಸಿರಾಗಿತ್ತು. ಹೃದಯದ ಶಿವನೊಡನೆ ಬೆರೆತು ಆತ್ಮಕಲ್ಯಾಣವನ್ನು ಸಾಧಿಸಿಕೊಂಡವನೆ ಲೋಕಕಲ್ಯಾಣವನ್ನು ಸಾಧಿಸಬಲ್ಲನೆಂದು ಅವರು ಅನೇಕ ವೇಳೆ ನನಗೆ ಬೋಧಿಸುತ್ತಿದ್ದರು. ಮನಸ್ಸಿನ, ಹೃದಯದ, ಬುದ್ಧಿಯ ಕಲ್ಮಷವನ್ನು ಕಳೆದುಕೊಂಡು ಆತ್ಮವನ್ನು ಪರಿಶುದ್ಧಗೊಳಿಸಿದರೆ ಪ್ರತಿಯೊಬ್ಬನೂ ಶಿವನಾಗಬಹುದೆಂದು ಅವರು ತಿಳಿಸುತ್ತಿದ್ದರು. ಅದು ಉಪನಿಷತ್ತಿನ ದಿವ್ಯವಾಣಿಯೇ ಆಗಿರುತ್ತಿತ್ತು.

ಅವರು ಅವ್ಯಾಜ ವಾತ್ಸಲ್ಯದಿಂದ ನನಗೆ ಅಡವೀಸ್ವಾಮಿಗಳ ಗದ್ದುಗೆಯ ಪೂಜೆಯನ್ನು ವಹಿಸಿ ಅದರಲ್ಲಿ ಬರುವ ಕಾಣಿಕೆಯನ್ನು ನನ್ನ ವಿದ್ಯಾಭ್ಯಾಸಕ್ಕೆ ವಿನಿಯೋಗಿಸುವಂತೆ ಅಪ್ಪಣೆಮಾಡಿದ್ದರು. ಆದರಿಂದಲೇ ನನ್ನ ವಿದ್ಯಾಭ್ಯಾಸ ಮುಂದುವರಿಯಿತು. ಆಗ ವಿದ್ಯುದ್ದೀಪವಿರಲಿಲ್ಲ. ಆದರೂ ನಾನು ವಾಸಿಸುತ್ತಿದ್ದ ಕೊಠಡಿಗೆ ಸೀಮೆಎಣ್ಣೆಯನ್ನು ಉಚಿತವಾಗಿ ದೊರಕಿಸುವ ವ್ಯವಸ್ಥೆ ಮಾಡಿದ್ದರು. ಬಂದಂತಹ ಭಕ್ತಾದಿಗಳಿಗೆ ನನ್ನನ್ನು ಪರಿಚಯ ಮಾಡಿಸಿ ಅವರಿಂದ ಬಟ್ಟೆ, ಪುಸ್ತಕಗಳಿಗಾಗಿ ಹಣವನ್ನು ಕೊಡಿಸುತ್ತಿದ್ದರು. ಅಷ್ಟೇ ಅಲ್ಲದೇ ಮಂಚದ ಮೇಲೆ ಅವರು ಕುಳಿತ್ತಿದ್ದಾಗ ಬಂದ ಪಂಚೆ, ಟವೆಲ್ ಮುಂತಾದ ಬಟ್ಟೆಗಳನ್ನು ನನಗೆ ಕೊಟ್ಟು ಆಶೀರ್ವದಿಸಿ

"ನಿನ್ನ ಜೀವಮಾನದಲ್ಲಿ ನೀನು ಅಂಗಡಿಗೆ ಹೋಗಿ ಬಟ್ಟೆಯನ್ನು ಕೊಳ್ಳಬೇಡ" ವೆಂದು ಹೇಳುತ್ತಿದ್ದರು. ಅವರ ಅಮೃತವಾಣಿಯ ಪ್ರಭಾವದಿಂದ 64 ನೇ ವಯಸ್ಸಿನಲ್ಲೂ ನಾನು ಅಂಗಡಿಗೆ ಹೋಗಿ ಒಂದು ಬಟ್ಟೆಯನ್ನೂ ಕೊಂಡು ತಂದಿಲ್ಲ. ಅವರ ಆಶೀರ್ವಾದ ಪ್ರಭಾವದಿಂದಲೂ ವಾಕ್ಸಿದ್ಧಿಯಿಂದಲೂ ಕರ್ನಾಟಕದ ಮಠಾಧೀಶ್ವರರೆಲ್ಲರೂ ನನ್ನನ್ನು ವಾತ್ಸಲ್ಯದಿಂದ ಅನುಗ್ರಹಿಸುತ್ತಾ ಪಂಜೆ, ಶಲ್ಯ ಶಾಲುಗಳನ್ನು ಆಶೀರ್ವದಿಸುತ್ತಲಿರುವರು. ನಿರಂಜನ ಜಂಗಮಮೂರ್ತಿಗಳ ತಪಸ್ಸಿದ್ಧಿ ಇಷ್ಟು ಅದ್ಭುತವೂ, ಅಪಾರವೂ, ಅಗಾಧವೂ ಆದುದೇಬುದನ್ನು ನಾನು ನಿತ್ಯವೂ ಸ್ಮರಿಸಿಕೊಳ್ಳುತ್ತಿರುವೆನು.

ಅವರು ಭಕ್ತರ ಆರ್ತಪರಿಸ್ಥಿತಿಯನ್ನು ಪರಿಹರಿಸಿಕೊಟ್ಟು ಅವರನ್ನು ನೆಮ್ಮದಿಯಿಂದ ಬಂಧು-ಮಿತ್ರರೊಡನೆ ಬಾಳುವಂತೆ ಆಶೀರ್ವದಿಸುತ್ತಿದ್ದುದನ್ನು ನಾನು ಮನಗಂಡಿದ್ದೆನು. ದೆವ್ವ, ಗಾಳಿ, ಪಿಶಾಚಿಗಳನ್ನು ಅನಾಯಾಸವಾಗಿ ಬಿಡಿಸಿ ಜನರನ್ನು ಸುಖವಾಗಿ ಬಾಳುವಂತೆ ಆಶೀರ್ವದಿಸುವುದು ಅವರ ನಿತ್ಯ ಜೀವನದಲ್ಲಿ ಹೊಂದಿಕೊಂಡಿತ್ತು. ಮಲೆನಾಡಿನ ಭಕ್ತರೊಬ್ಬರಿಗೆ ಅಂಟಿಕೊಂಡಿದ್ದ ಬ್ರಹ್ಮಪಿಶಾಚಿಯನ್ನು ಅವರು ಬಿಡಿಸಿ ಮಠದ ಪಕ್ಕದಲ್ಲಿರುವ ಬೆಟ್ಟದಗವಿಯಲ್ಲಿರಿಸಿ ವರ್ಷಕ್ಕೊಮ್ಮೆ ಅಲ್ಲಿಗೆ ಹೋಗಿ ಹಣ್ಣುಗಳನ್ನುಕೊಟ್ಟು ಆ ಪಿಶಾಚಿಯನ್ನು ಮಾತಾಡಿಸಿಕೊಂಡು ಬರುತ್ತಿದ್ದುದು ಎಲ್ಲರಿಗೂ ತಿಳಿದ ವಿಷಯವಾಗಿದೆ. ಆ ಬ್ರಹ್ಮಪಿಶಾಚಿ ಹಿಡಿದಿದ್ದ ವ್ಯಕ್ತಿಯನ್ನು ಬಚ್ಚಲಿನಲ್ಲಿ ಶ್ರೀಗಳು ಸ್ನಾನ ಮಾಡುವಾಗ ಮಲಗಿಸಿ ಅವನ ಮೇಲೆ ನಿಂತು ಸ್ನಾನ ಮಾಡಿದಾಗ ಆ ಪವಿತ್ರವಾದ ಸ್ನಾನೋದಕದಿಂದ ಆ ಪಿಶಾಚಿಯು ಶಾಂತನಾಗಿ ಆ ವ್ಯಕ್ತಿಯನ್ನು ಬಿಟ್ಟು ಶ್ರೀಗಳ ಅಪ್ಪಣೆಯಂತೆ ಅವರು ಇರಿಸಿದ ಕಡೆ ನೆಮ್ಮದಿಯಿಂದ ಇರುವುದಾಗಿ ಹೇಳಿತು. ಆಗ ಶ್ರೀಗಳು ಅದನ್ನು ಗವಿಯಲ್ಲಿ ನೆಲೆಸಲು ಅಪ್ಪಣೆ ಕೊಡಿಸಿದರು. ಅಂದಿನಿಂದ ಆ ಭಕ್ತರಿಗೆ ಪಿಶಾಚಿಯ ಸೋಂಕು ಇಲ್ಲವಾಯಿತು. ಇಂತಹ ಎಷ್ಟೋ ಅದ್ಭುತವಾದ ಪವಾಡಗಳನ್ನು ಶ್ರೀಗಳು ನಡೆಸಿದ್ದರು. ಇಂತಹ ಮಹಿಮೆಗಳು ಅವರಿಗೆ ಅನಾಯಾಸವಾಗಿ ಉಸಿರಾಡುವಂತೆ ಸಹಜವಾಗಿ ನಡೆದು ಲೋಕದ ಜನರಿಗೆ ಒಳ್ಳೆಯದನ್ನು ಮಾಡಿದ್ದವು.

ಇವರು ಶ್ರೀಗುರು ತೋಂಟದಾರ್ಯರಲ್ಲೂ ಶ್ರೀಗರು ಅಟವೀಸ್ವಾಮಿಗಳಲ್ಲೂ ಪೂರ್ಣ ಭಕ್ತಿವಂತರಾಗಿದ್ದರು. ಅವರಿಗೆ ಮಠದ ವ್ಯವಹಾರಗಳಲ್ಲಿ ಎಂದೆಂದಿಗೂ ಕ್ಲೇಶವೇ ಉಂಟಾಗುತ್ತಿರಲಿಲ್ಲ. ಹಾಗೇನಾದರೂ ಕ್ಲೇಶ ಬಂದರೆ "ಸಿದ್ಧಲಿಂಗನೇ ಪರಿಹರಿಸುತ್ತಾನೆ" ಎಂದು ಹೇಳುತ್ತಿದ್ದರು. ಮರುಕ್ಷಣದಲ್ಲಿ ಆ ಕ್ಲೇಶ ಪರಿಹಾರವಾಯಿತೆಂದು ಸಂಬಂಧಪಟ್ಟವರು ಬಂದು ಅರಿಕೆ ಮಾಡಿಕೊಳ್ಳುತ್ತಿದ್ದರು. ಶಿವಯೋಗಿ ಸಾರ್ವಭೌಮರೆನಿಸಿದ ಶ್ರೀಗಳು ನಿರಂಜನ ಜಂಗಮಸ್ಥಿತಿಯ ಪೂರ್ಣ ಫಲವನ್ನು ಲೋಕಕ್ಕೆ ಧಾರೆ ಎರೆದು ನಿತ್ಯವೂ ಆತ್ಮಾರಾಮರಾಗಿ ಆತ್ಮಾನಂದವನ್ನು ಅನುಭವಿಸುತ್ತಿದ್ದರು. ಅವರ ತಪಶ್ಯಕ್ತಿಯ ದಿವ್ಯ ಪ್ರಭೆ ಲೋಕದ ಮೂಲೆ ಮೂಲೆಗಳಲ್ಲೂ ಹರಡಿತ್ತು. ಮಂತ್ರಾಲಯದ ಶ್ರೀ ರಾಘವೇಂದ್ರಸ್ವಾಮಿಗಳಂತೆಯೂ, ಅಥಣೀ ಶಿವಯೋಗಿಗಳಂತೆಯೂ ಶ್ರೀಗುರು ಉದ್ದಾನಶಿವಯೋಗೀಶ್ವರರು ಲೋಕ ಕಲ್ಯಾಣಕ್ಕಾಗಿ ಅನಾಯಾಸವಾಗಿ ಬಾಳುತ್ತಾ ಜನರನ್ನು ಕತ್ತಲೆಯಿಂದ ಬೆಳಕಿನ ಕಡೆ, ರೋಗರುಜಿನಗಳಿಂದ ಆರೋಗ್ಯ ಸೌಭಾಗ್ಯಗಳ ಕಡೆಗೂ ಒಯ್ಯುತ್ತಾ, ದೇಹವನ್ನು ತೊರೆದ ಮೇಲೆಯೂ ಬಾಳಿ ಬದುಕುವುದಕ್ಕೆ ವ್ಯವಸ್ಥೆ ಮಾಡಿಕೊಂಡರು.

ಶ್ರೀಗಳು ಬದುಕಿದ್ದಾಗ ಲೋಕ ಕಲ್ಯಾಣವನ್ನು ಸಾಧಿಸುವುದರಷ್ಟರಲ್ಲಿ ತೃಪ್ತರಾಗಿರಲಿಲ್ಲ. ದೇಹದಿಂದ ಹೊರಗೆ ಹೋದ ಮೇಲೆಯೂ ನಿಜಯೋಗ ಸಮಾಧಿಯಲ್ಲಿ ನೆಲೆಸಿದ್ದು ಸೂರ್ಯ-ಚಂದ್ರರಿರುವವರೆಗೂ ಲೋಕ ಕಲ್ಯಾಣವನ್ನು ಸಾಧಿಸುತ್ತಿರಬೇಕು; ಇದೇ ನಿಜವಾದ ಶಿವಯೋಗ ಎಂದು ಅವರು ನನ್ನೊಡನೆ ಹೇಳುತ್ತಿದ್ದರು. ಈಗ ಅವರು ಯೋಗ ಸಮಾಧಿಯಲ್ಲಿ ನೆಲೆಸಿದ್ದಾರೆ. ಅಲ್ಲಿ ಆ ಸಮಾಧಿಲಿಂಗವನ್ನು ಮೊನ್ನೆ ನಾನು ನಮಸ್ಕರಿಸಿದಾಗ ನನ್ನ ಜ್ಞಾನ ನೇತ್ರಕ್ಕೆ ಆ ಲಿಂಗದಲ್ಲಿ ಅವರೇ ಕುಳಿತ್ತಿದ್ದುದು ಗೋಚರವಾಯಿತು.

"ಏನಪ್ಪಾ, ಇಷ್ಟು ದಿವಸಕ್ಕೆ ನನ್ನ ದರ್ಶನಕ್ಕೆ ಬಂದೆಯಾ? ಚೆನ್ನಾಗಿರುವೆಯಾ...." ? ಎಂದು ಅವರು ನನ್ನನ್ನು ವಿಚಾರಿಸಿದ ಅನುಭವವಾಯಿತು ಆಗ "ಗುರುವೇ ನಾನು ತಮಗೆ ಏನಾದರೂ ಅಪಚಾರ ಮಾಡಿದ್ದರೆ ಕ್ಷಮಿಸಿ ಎಂದು ಕೇಳಿಕೊಂಡೆನು. ಅದಕ್ಕೆ ಅವರು ಸಂತೋಷದಿಂದ ಆಶೀರ್ವದಿಸಿ "ಇನ್ನೂ ಕೆಲವು ಕಾಲ ಧರ್ಮಕ್ಕಾಗಿ ಬಾಳಿ ಬದುಕು. " ಎಂದು ಹರಸಿದರು.

"ಎಲ್ಲರಲ್ಲೂ ಇರುವ ಶಿವನನ್ನು ನಿನ್ನಲ್ಲಿ ಮನಗಂಡು ಎಲ್ಲರನ್ನೂ ಅವನೆಂದೇ ಪ್ರಿತಿಸಿ ನಿನ್ನ ನಿಲವನ್ನು ದೃಢಪಡಿಸಿಕೋ. ಈಗ ಬಿಟ್ಟರೆ ಮುಂದೆ ಅದು ಸಿಕ್ಕಲಾರದು" ಎಂದು ಶ್ರೀಗಳು ಆಶೀರ್ವದಿಸಿ ದರು. ಹೀಗೆ ಶಿವಯೋಗದಲ್ಲಿ ಬಾಳಿದ ಮಹಾತ್ಮರು ಎಂದೆಂದಿಗೂ ನಿತ್ಯಜೀವಿಗಳಾಗಿ ಬಾಳುತ್ತಾ ಭಕ್ತಾನು ಗ್ರಹಲೀಲೆಯನ್ನು ನಡೆಸುತ್ತಲಿರುವರೆಂಬುದಕ್ಕೆ ಶ್ರೀಗುರು ಉದ್ದಾನೇಶ್ವರ ಶಿವಯೋಗಿಗಳ ನಿ ಜ ಸಮಾಧಿಯೇ ಸಾಕ್ಷಿಯೆನಿಸಿದೆ. ದಾವಣಗೆರೆಯ ಬಕ್ಕಪ್ಪಸ್ವಾಮಿಗಳಂ ತೆಯೂ, ಷರೀಫ್ ಶಿವಯೋಗಿಗಳಂತೆಯೂ ಶ್ರೀ ಗುರು ಉದ್ದಾನಶಿವಯೋಗಿಗಳು ಇದ್ದಾಗಲೂ, ಹೋದಮೇಲೆ ಯೂ ಅದ್ಭುತವಾಗಿ ಲೋಕಕಲ್ಯಾಣವನ್ನು ಅನುಗ್ರಹಿಸು ತ್ತಿರುವುದು ಮಾನವ ಸಮಾಜದ ಪುಣ್ಯವಿಶೇಷವೆನಿಸಿದೆ.

ಇವರು ತಮ್ಮ ತಪೋಬಲದ ಮಹಿಮೆಯಿಂದ ಯೋಗ್ಯರಾದ ಉತ್ತರಾಧಿಕಾರಿಗಳನ್ನು ನೇಮಿಸಿಕೊಂಡು ಅವರಿಗೆ ತಮ್ಮ ಯೋಗಶಕ್ತಿಯನ್ನು ಧಾರೆಎರೆದು ಅನುಗ್ರ ಹಿಸಿದರು. ಅವರೇ ಇಂದಿನ ಮಠಾಧ್ಯಕ್ಷರಾದ ಶ್ರೀ ಶಿವಕುಮಾರ ಮಹಾ ಸ್ವಾಮಿಗಳು. ಇವರು ತಮ್ಮ ಗುರುಗಳಿಗಿಂತಲೂ ಮಿಗಿಲಾದ ಸಂಯಮ ಶಕ್ತಿಯನ್ನು ಸಾಧಿಸಿ ಅದ್ಭುತವಾದ ಸಿದ್ಧಿಯನ್ನು ಗಳಿಸಿರುವರು. ಇವರ ಕಾಲದಲ್ಲಿ ವಿದ್ಯಾಭ್ಯಾಸವೂ, ದಾಸೋಹವೂ ನೂರ್ಮಡಿ ಯಾಗಿ ಹೆಚ್ಚಾಗಿರುವುದನ್ನು ಪ್ರತಿಯೊಬ್ಬರೂ ಮನಗಂಡಿ ರುವರು. ಮಗನು ಆರೋಗ ದೃಢಕಾಯನಾಗಿ ಧರ್ಮ ದಿಂದ ಸತ್ಯಶುದ್ಧ ಕಾಯಕವನ್ನಾಚರಿಸುತ್ತ ಕೀರ್ತಿಯನ್ನು ಗಳಿಸಿದರೆ ತಂದೆಯುಆಯಸ್ಸು ಹೆಚ್ಚುವುದೆಂದು ಹಿರಿಯರು ಹೇಳುತ್ತಾರೆ. ಹಾಗೆ ಶ್ರೀ ಶಿವಕುಮಾರ ಶಿವಯೋಗೀ ಶ್ವರರು ಗುರುಗಳ ಕಾರ್ಯವನ್ನು ಉತ್ಕೃಷ್ಟವಾಗಿ ಮುಂದು ವರಿಸಿ ವಿಶ್ವಜ್ಯೋತಿಯೂ, ಕರ್ಮಯೋಗಿಯೂ ಆಗಿ ಕಂಗೊಳಿಸುತ್ತ ಇಂದಿನ ವಿವೇಕಾನಂದರಾಗಿ ವಿಶ್ವಕ್ಕೆ ಶಾಂತಿ ಸಂದೇಶವನ್ನು ಆಚರಣೆಯ ಮೂಲಕ ಉಪದೇಶಿ ಸುತ್ತಿರುವಾಗ ಶ್ರೀ ಗುರು ಉದ್ದಾನೇಶ್ವರರ ಶಿವಯೋಗ ಸಮಾಧಿಲೀಲೆಯು ನಿರಾತಂಕವಾಗಿ ನಡೆಯುತ್ತಿರುವುದ ರಲ್ಲಿ ಯಾವ ಸಂದೇಹವೂ ಇಲ್ಲ. ಈಗಿನ ಮಠದ ಸ್ಥಿತಿ ಹಿಂದಿಗಿಂತಲೂ ನೂರ್ಮಡಿ ಹೆಚ್ಚಿ ಕರ್ನಾಟಕದ ವಿವಿಧ ಕ್ಷೇತ್ರಗಳಲ್ಲಿ ಸೇವೆಯನ್ನು ಸಲ್ಲಿಸಲಿಕ್ಕೆ ಯೋಗ್ಯರಾದ ಅಭ್ಯರ್ಥಿಗಳನ್ನು ದೊರಕಿಸುವ ಪುಣ್ಯಕ್ಷೇತ್ರವೆನಿಸಿರುವುದು ಎಲ್ಲರಿಗೂ ತಿಳಿದ ವಿಷಯವೇ ಆಗಿದೆ. ನಾನೂ ಅಲ್ಲಿಯೇ ಶ್ರೀಗಳ ಪ್ರಸಾದದಿಂದ ಬೆಳೆದು ಅವರೀರ್ವರ ಆಶೀರ್ವಾದ ದಿಂದಲೇ ಉನ್ನತ ಮಟ್ಟದಲ್ಲಿ ಸೇವೆಯನ್ನು ಸಲ್ಲಿಸುತ್ತಿರು ವೆನು. ಅವರ ಕೃಪಾ ಪ್ರಸಾದ ಈ ಸೇವಕನ ಮೇಲೆ ನಿರಾತಂಕವಾಗಿ ಪ್ರಸರಿಸಬೇಕೆಂದು ಪ್ರಾರ್ಥಿಸುತ್ತೇನೆ. ಏಕೆಂದರೆ ಒಬ್ಬ ವ್ಯಕ್ತಿಯ ವಿಕಾಸ ಗುರುಜಂಗಮಾತ್ಮಕ ರಾದ ಶ್ರೀಗಳ ಪೂರ್ಣಾನುಗ್ರಹವನ್ನೇ ಮುಖ್ಯವಾಗಿ ಅವ ಲಂಬಿಸಿದೆ.

ಶ್ರೀ ಶಿವಕುಮಾರ ಸ್ವಾಮಿಗಳು ಹಿಂದಿನ ಗುರುಪರಂಪರೆಯಂತೆ ಬಾಳುತ್ತ ಭಕ್ತಾನುಗ್ರಹಲೀಲೆ ಯನ್ನು ಅದ್ಭುತವಾಗಿ ನಡೆಸುತ್ತಲೇ ಮುಂದೆಯೂ ಅದನ್ನು ಅನೂಚಾನವಾಗಿ ನಡೆಸಿಕೊಂಡು ಹೋಗಲು ಯೋಗ್ಯರಾದ ಉತ್ತರಾಧಿಕಾರಿಗಳನ್ನು ನೇಮಿಸಿಕೊಂಡಿ ರುವುದು ಅವರ ದೂರದರ್ಶಿತ್ವದ ಅಪಾರ ಅನುಭವವನ್ನು ವ್ಯಕ್ತಪಡಿಸುತ್ತದೆ. ಅವರೇ ಶ್ರೀ ಗೌರೀಶಂಕರ ಮಹಾ ಸ್ವಾಮಿಗಳು. ಇವರು ಸ್ವಯಂ ವೈರಾಗ್ಯಶೀಲರು, ಶಾಂತಿ ಪ್ರಿಯರು ಮತ್ತು ನಿಸ್ಸ್ವಾರ್ಥಿಗಳು. ಇವರ ಕಾಲದಲ್ಲಿ ಮಠದ ಇತಿಹಾಸ ಮತ್ತಷ್ಟು ಹೆಚ್ಚು ಬೆಳೆದು ಶ್ರೀ ಸಿದ್ಧ ಗಂಗೆಯ ನಿರಂಜನ ಜಂಗಮ ಪರಂಪರೆ ಓಂಕಾರ ಪೀಠದ ಮಹತ್ವವನ್ನು ಲೋಕಕ್ಕೆ ತಿಳಿಯಪಡಿಸುತ್ತ, ಓಂಕಾರದ ಧ್ಯಾನದಿಂದ ಒಂದಿಲ್ಲೊಂದು ಜನ್ಮದಲ್ಲಿ ಎಲ್ಲ ಸಾಧಕರೂ ಓಂಕಾರ ಸ್ಥಿತಿಯನ್ನು ಹೃದಯದಲ್ಲಿ ಆಳವಡಿಸಿಕೊಂಡು, ಓಂಕಾರದಲ್ಲಿ ಸಮರಸವಾಗಿ ಬೆರೆಯುವಂತೆ ಆಶೀರ್ವದಿಸ ಲೆಂದೇ ಪ್ರಾರ್ಥಿಸುತ್ತೇನೆ.



ನಿಮ್ಮ ಶರೀರವನ್ನು ಸದಾ ದೇವ, ದ್ವಿಜ, ಗುರು, ಪ್ರಾಜ್ಞರ ಉಪಾಸನೆಯಲ್ಲಿ ಸವೆಸಬೇಕು.
ಅದು ಶುಚಿಯಾಗಿರಬೇಕು. ಬ್ರಹ್ಮಚರ್ಯೆಯನ್ನು ಪರಿಪಾಲಿಸಬೇಕು. ಅಹಿಂಸೆಯನ್ನು ಅನುಸರಿಸಬೇಕು.
ಇವು ಶರೀರದ ಲಕ್ಷಣಗಳು.

—ಭಗವದ್ಗೀತೆ.

# ಭಾರತದ ಭಾಗ್ಯೋದಯವೆಂತು ?

-ಸಗರ ಕೃಷ್ಣಾಚಾರ್ಯ

ಇಂದಿನ ಶಾಸಕರಲ್ಲಿ ಮನೆ ಮಾಡಿಕೊಂಡಿರುವ ಸರ್ವಾಧಿಕಾರ ಮನೋಭಾವ, ಅಧಿಕಾರ ಲಾಲಸೆ, ನಿಷ್ಠೆಯ ಅಭಾವ, ದೇಶದ ಉನ್ನತಿಗೆ ಮಾರಕವಾಗಿವೆ. ಪ್ರಾಚೀನ ಭಾರತದ ರಾಜರುಗಳ ಸೇವಾ ಮನೋಭಾವ, ನಿಷ್ಠೆ, ಅಧಿಕಾರದ ವ್ಯಾಮೋಹವಿಲ್ಲದಿರುವಿಕೆ ಇವುಗಳಿಂದ ಈಗಿನ ಶಾಸಕರು ಪಾಠ ಕಲಿತದ್ದೇ ಆದರೆ ಭಾರತದ ಭಾಗ್ಯೋದಯ ಕೈಗೆಟುಕದ ಕುಸುಮುವಾಗಲಾರದು.

ನಮ್ಮ ರಾಷ್ಟ್ರ ಒಂದು ಕಾಲಕ್ಕೆ ಎಂಥೆಂಥ ರಾಜರ್ಷಿಗಳ ಆಶ್ರಯದಲ್ಲಿದ್ದು, ಅವರ ಅಖಂಡ ತಪಃಪ್ರಭಾವದಿಂದ ಹೇಗೆ ತನ್ನ ಪವಿತ್ರ ಸಂಸ್ಕೃತಿಯನ್ನೂ ಧವಲ ಕೀರ್ತಿಯನ್ನೂ ಉಳಿಸಿಕೊಂಡುಬಂದಿತೆಂಬುದನ್ನು ನೆನೆದರೆ ರೋಮಾಂಚನವಾಗುತ್ತದೆ. 'ಕರ್ತುಮಕರ್ತುಂ ಅನ್ಯಥಾ ಕರ್ತುಂ'ಎಂಬ ಅಚಿಂತ್ಯ ಶಕ್ತಿಯುಳ್ಳ ರಾಜರು ತಮ್ಮ ಅಗಾಧ ಲೀಲೆಗಳಿಂದ ರಾಷ್ಟ್ರದ ಸ್ವರೂಪವಷ್ಟೇ ಅಲ್ಲ, ಸಮಸ್ತ ಭೂಮಂಡಲದ ದಿಶೆಯನ್ನೇ ಬದಲಾಯಿಸಿ ಹೊಸ ಮನ್ವಂತರವನ್ನೇ ಸೃಷ್ಟಿಸಿದ್ದಾರೆ.

ಆದಿದೇವ ಸ್ವಯಂಭೂವಿನ ಮಗನಾದ ಸ್ವಾಯಂಭುವ ಮನು, ತನ್ನ ಮಗ ಪ್ರಿಯವ್ರತನು, ರಾಜ್ಯ ಶಾಸನದ ಅಪೇಕ್ಷೆಯಿಂದ ದೂರ ಸರಿದು, ಬ್ರಹ್ಮಸತ್ರದೀಕ್ಷೆ ನಿರಂತರ ಬ್ರಹ್ಮಾಭ್ಯಾಸ ಇವುಗಳಲ್ಲಿಯೇ ತನ್ನ ಜೀವನವನ್ನು ವ್ಯತೀತಗೊಳಿಸುವ ನಿಯಮವನ್ನು ಹೊಂದುವ ಮಾರ್ಗದೆಡೆಗೆ ಮನಸ್ಸನ್ನು ಹರಿಸುತ್ತಿರುವುದನ್ನು ತಿಳಿದು ಆತನಿಗೆ ರಾಜ್ಯಶಾಸನದ ಆಜ್ಞೆಯನ್ನು ಇತ್ತನು. ಪೃಥ್ವಿಯ ಪಾಲನೆಗಾಗಿ ಶಾಸ್ತ್ರದಲ್ಲಿ ಹೇಳಿದ ಎಲ್ಲ ಶ್ರೇಷ್ಠ ಗುಣಗಳೂ ಆತನಲ್ಲಿದ್ದುದರಿಂದಲೇ ಅಂಥ ಸಂಪನ್ನ ಮಗನಿಂದ ರಾಜ್ಯಕ್ಕೆ ಮೆರಗು ಬಂದೀತು ! ಎಂದು ತಿಳಿದು ಆತನ ಮನಸ್ಸನ್ನು ಇತ್ತಕಡೆಗೆ ತಿರುಗಿಸಿದ. ಆದರೆ, ಸತ್ತ್ವಶಾಲೀ ಪ್ರಿಯವ್ರತ, ಅಖಂಡ ಸಮಾಧಿಯೋಗದ ಮೂಲಕ ತನ್ನ ಸಕಲ ಇಂದ್ರಿಯಗಳನ್ನೂ, ಕ್ರಿಯೆಗಳನ್ನೂ ಪರಮಾತ್ಮನ ಪಾದಾರವಿಂದಗಳಲ್ಲಿ ಸಮರ್ಪಿಸಿಬಿಟ್ಟದ್ದರಿಂದ ತಂದೆಯ ಆಜ್ಞೆ ಯಾವ ರೀತಿಯಿಂದಲೂ ಉಲ್ಲಂಘನಾರ್ಹವಲ್ಲದಿದ್ದರೂ, ರಾಜ್ಯಾಧಿಕಾರ ಹೊಂದಿ, ತನ್ನ ಆತ್ಮಸ್ವರೂಪ ಸ್ತ್ರೀ ಪುತ್ರಾದಿ ಅಸತ್ ಪ್ರಪಂಚದಿಂದ ಆಚ್ಛಾದಿತವಾಗಿ, ರಾಜ್ಯ ಮತ್ತು ಕುಟುಂಬದ ಚಿಂತೆಯಲ್ಲಿಯೇ ಸಿಲುಕಿ, ತಾನು ಪರಮಾರ್ಥ ತತ್ತ್ವವನ್ನು ಪ್ರಾಯಃ ಮರೆತುಬಿಡಬಹುದು ! ಎಂದು ತಿಳಿದು, ನಿರಾಕರಿಸಿದನು.

ಸೃಷ್ಟಿಕರ್ತನಾದ ಬ್ರಹ್ಮನಿಗೆ ಸದಾ ಈ ಗುಣಮಯ ಪ್ರಪಂಚದ ವೃದ್ಧಿಯ ವಿಚಾರವೇ ಇರುವುದರಿಂದ, ಸಹಜವಾಗಿಯೇ ಆತನಿಗೆ ಪ್ರಿಯವ್ರತನ ಈ ಮನ:ಪ್ರವೃತ್ತಿ ತಿಳಿದು ಬಂತು. ಆತ ಸಂಸಾರದಲ್ಲಿಯ ಸಕಲ ಜೀವರುಗಳ ಅಭಿಪ್ರಾಯವನ್ನು ಬಲ್ಲವನು. ನಾರದ ಮಹರ್ಷಿಗಳ ಉಪದೇಶ ಬಲದಿಂದ ಆತ ನಿವೃತ್ತಿಮಾರ್ಗದತ್ತ ಒಲಿಯುತ್ತಿದ್ದುದು ಆತನ ಮಟ್ಟಿಗೆ ಸೂಕ್ತವೆನಿಸಿದರೂ ಅದು ರಾಜ್ಯಕ್ಕೂ, ರಾಜಧರ್ಮಕ್ಕೂ ವ್ಯತಿರಿಕ್ತವಾಗಿದ್ದಿತು. ಆತನ ರಾಜ್ಯಭಾರದಲ್ಲಿ 'ಅಜನಾಭ ಖಂಡ' ದ ಕೀರ್ತಿಯಷ್ಟೇ ಹೆಚ್ಚಬೇಕಾಗಿರಲಿಲ್ಲ-ಸಮಸ್ತ ಭೂಮಂಡಲದ ರಾಜ್ಯಶಾಸನವೇ ಸುವ್ಯವಸ್ಥೆಗೆ ಒಳಪಡಬೇಕಾಗಿತ್ತು. ಇಂಥ ಪ್ರತಾಪಶಾಲೀ ಚಕ್ರವರ್ತಿ ಸನ್ಯಾಸ ದೀಕ್ಷೆಹೊಂದಿ ತಪಸ್ಸುಗೈಯುತ್ತ ಕುಳಿತರೆ, ಪ್ರಪಂಚ ವೃದ್ಧಿಹೊಂದುವ ಬಗೆಯೆಂತು? ಎಂದು ಆಲೋಚಿಸಿ, ಬ್ರಹ್ಮ ನಾಲ್ಕುವೇದ ಮರೀಚಿ ಮುಂತಾದ ಪಾರ್ಷದರಿಂದೊಡಗೂಡಿ, ಧರೆಗಿಳಿದು ಬಂದು ಮುಗುಳ್ನಗೆಯಿಂದ ಕೂಡಿದ ದಯಾದೃಷ್ಟಿಯನ್ನು ಪ್ರಿಯವ್ರತನ ಮೇಲೆ ಬೀರಿ, ರಾಜರಿಗೆ ಉಪದೇಶಿಸಬೇಕಾದ ಸತ್ಯಸಿದ್ಧಾಂತವನ್ನು ವಿಸ್ತೃತವಾಗಿ ತಿಳಿಸಿದನು. ಕೊನೆಯಲ್ಲಿ, 'ಪ್ರಿಯವ್ರತ! ಮನಸ್ಸು ಮತ್ತು ಇಂದ್ರಿಯ ರೂಪೀ ಷಡ್ವೈರಿಗಳನ್ನು ಗೆದ್ದು, ತನ್ನ ಆತ್ಮನಲ್ಲಿಯೇ ರಮಿಸುವ ಬುದ್ಧಿವಂತನು ಗೃಹಸ್ಥಾಶ್ರಮಿಯಾಗಿದ್ದರೂ ಯಾವ ಭಯವಿಲ್ಲ. ಇಂದ್ರಿಯನಿಗ್ರಹ ಸುಲಭಸಾಧ್ಯವಲ್ಲವೆಂಬುದು ನಿಜ. ಆದರೆ ಪರಮಾತ್ಮನ ಅನುಗ್ರಹದಿಂದ ನೀನಾಗಲೇ ಅವುಗಳನ್ನು ಜಯಿಸಿರುವಿ. ಅಂದ ಮೇಲೆ ಆತನಿತ್ತ ಭೋಗಗಳನ್ನು ಭೋಗಿಸು. ಆ ತರುವಾಯ ನಿಸ್ಸಂಗನಾಗಿ ನಿನ್ನ ಆತ್ಮಸ್ವರೂಪದಲ್ಲಿ ಸ್ಥಿತನಾಗು!

ಂದು ಧೈರ್ಯವಿತ್ತನು.

ಸಣ್ಣವನಾದ ಪ್ರಿಯವ್ರತನು, ಅದನ್ನು ೂಲಂಕಷ ಅರಿತ ಮೇಲೆ 'ತವಾಜ್ಞಾ ಶಿರಸಾ ಮಾನ್ಯಾ!' ೆಂದು ತಿಳಿಸಿ, ಕೇವಲ ಕ್ಷಾತ್ರಧರ್ಮ ರಕ್ಷಣೆಗಾಗಿಯೇ ಾಜ್ಯಭಾರವನ್ನು ಮಾಡಲು ಒಪ್ಪಿದನು. ಸ್ವಾಯಂಭುವ ನುವಿಗೆ ಆದ ಸಂತಸ ಅಷ್ಟಿಷ್ಟಲ್ಲ. ತನ್ನ ಇಚ್ಛೆ ಕೈ ೂಡಿತೆಂದು ತಿಳಿದು, ರಾಜ್ಯದ ಮೇಲಿನ ವ್ಯಾಮೋಹ ನ್ನು ದೂರ ಸರಿಸಿ, ದೇವರ್ಷಿ ನಾರದರ ಆಜ್ಞೆಯಂತೆ, ಿಯವ್ರತನಿಗೆ ಸಂಪೂರ್ಣ ಭೂಮಂಡಲದ ರಕ್ಷಣೆಯ ಾರವನ್ನೊಪ್ಪಿಸಿ,ತಾನು ಸಂಸಾರದಿಂದ ನಿವೃತ್ತಿ ಹೊಂದಿದ. ೀಗ ಪೃಥ್ವೀಪತಿಯಾದ ಮಹಾರಾಜ ಪ್ರಿಯವ್ರತನು ಪರ ಮಾತ್ಮನ ಇಚ್ಛಾನುಸಾರ ರಾಜ್ಯ ಶಾಸನ ಕಾರ್ಯನಿಯುಕ್ತ ಾದ. ಸದಾ ಪರಮಾತ್ಮನ ಧ್ಯಾನದಲ್ಲಿಯೇ ನಿರತನಾಗಿ ುತ್ತಿದ್ದುದರಿಂದ ರಾಗ ದ್ವೇಷಾದಿ ಮಲಗಳು ಆತನನ್ನು ೋಂಕಲಿಲ್ಲ. ಅತ್ಯಂತ ಪವಿತ್ರವೂ, ಶುದ್ಧವೂ ಆದ ುನಸ್ಸಿನಿಂದ ಕೇವಲ ಹಿರಿಯರ ಮಾನ-ಮರ್ಯಾದೆ ಳನ್ನು ಕಾಯುವ ನಿಮಿತ್ತದಿಂದಲೇ ಪೃಥ್ವಿಯ ಶಾಸನ ಯ್ಯತೊಡಗಿದ. ಈ ರೀತಿ ಆತ ಹನ್ನೊಂದು ಅರ್ಬುದ ರ್ಷಗಳ ಪರ್ಯಂತ ಪೃಥ್ವಿಯನ್ನಾಳಿದ. ತನ್ನ ಶೌರ್ಯ-ಾಹಸಗಳನ್ನು ಮೆರೆದ. ಪ್ರಾಣಪ್ರಿಯೆಯಾದ ಬರ್ಹಿಷ್ಮತಿ ೊಡನೆ ಸುಂದರ ಸಂಸಾರ ಹೂಡಿ, ಹನ್ನೊಂದು ಮಕ್ಕಳ ಂದೆಯಾದಾಗಲೂ ವಿವೇಕ ಹೀನನಂತೆ ಆತ್ಮ ವಿಸ್ಮೃತಿ ೊಂದಿರಲಿಲ್ಲ. ಆಸಕ್ತಿರಹಿತನಾಗಿಯೇ ಬಾಳಿದ. ಸಕಲ ಜೆಗಳ ಹಿತರಕ್ಷಕನಾಗಿ ಮೆರೆದ. ಶುದ್ಧ ಆಡಳಿತ ಒದ ಿಸಿದ.

ಸೂರ್ಯದೇವ ಸುಮೇರು ಪರ್ವತವನ್ನು ಸುತ್ತು ರುವಾಗ, ಲೋಕಾಲೋಕ ಪರ್ಯಂತ ಪೃಥ್ವಿಯ ಾವ ಯಾವ ಭಾಗವನ್ನು ಆಲೋಕಿತಗೊಳಿಸುವನೋ ವುಗಳಲ್ಲಿಯ ಅರ್ಧದಲ್ಲಿ ಪ್ರಕಾಶ, ಉಳಿದರ್ಧದಲ್ಲಿ ಅಂಧ ಾರ ತುಂಬಿರುತ್ತಿತ್ತು. ಅದು ಈತನಿಗೆ ಹಿಡಿಸಲಿಲ್ಲ. ಾನು ರಾತ್ರಿಯನ್ನು ಹಗಲಿನಲ್ಲಿ ಪರಿವರ್ತಿಸುವೆ !' 'ರಜನೀಮಪಿ ದಿನಂಕರಿಷ್ಯಾಮಿ !') ಎಂದು ಸಂಕಲ್ಪ ಾಳಿ, ಸೂರ್ಯನಿಗೆ ಸಮಾನ ವೇಗವುಳ್ಳ ಒಂದು ಜ್ಯೋತಿರ್ಮಯ ರಥವನ್ನೇರಿ ಪ್ರತಿ ಸೂರ್ಯನಂತೆ ತನ ಹಿಂದೆ ಹಿಂದೆ ಪೃಥ್ವಿಯ ಏಳು ಪ್ರದಕ್ಷಿಣೆ ಹಾಕಿದನು ರಮಾತ್ಮನ ಉಪಾಸನೆಯಿಂದಾಗಿ ಆತನ ಅಲೌಕಿಕ ಪ್ರಭಾವ ಬಹುವಾಗಿ ಹೆಚ್ಚಿತ್ತು. ಆ ಸಮಯದಲ್ಲಿ ಆತನ ರಥದ ಗಾಲಿಗಳಿಂದಾದ ಪರಿಖಾತಗಳೇ ಸಪ್ತ ಸಮುದ್ರಗಳೂ, ಪೃಥ್ವಿಯ ಮೇಲೆ ಸಪ್ತದ್ವೀಪಗಳೂ ನಿರ್ಮಾಣವಾದವು. ಅವುಗಳೇ ಕ್ರಮಶಃ ಜಂಬೂ, ಪ್ಲಕ್ಷ, ಶಾಲ್ಮಲಿ ಕುಶ, ಕ್ರೌಂಚ, ಶಾಕ ಮತ್ತು ಪುಷ್ಕರ ಎಂಬ ದ್ವೀಪಗಳಾಗಿಯೂ, ಕ್ಷಾರ, ಇಕ್ಷುರಸ, ಮದಿರಾ, ಘೃತ, ಕ್ಷೀರ, ಮಂಡ ಮತ್ತು ಶುದ್ಧ ಜಲದ ಶರಧಿಗಳಾಗಿಯೂ ನಿರ್ಮಿತವಾದವು. ತನ್ನ ಅನುಗತ ಮಕ್ಕಳಾದ, ಅಗ್ನೀಧ್ರ, ಇಧ್ಮಜಿಹ್ವ, ಯಜ್ಞಬಾಹು, ಹಿರಣ್ಯರೇತಾ, ಘೃತಪೃಷ್ಠ ಮೇಧಾತಿಥಿ ಮತ್ತು ವೀತಿಹೋತ್ರ, ಇವರನ್ನು ಕ್ರಮವಾಗಿ ಒದೊಂದು ದ್ವೀಪದ ರಾಜರನ್ನಾಗಿ ಮಾಡಿದ. ಕೊನೆಗೆ ನಾರದರ ಉಪದೇಶದಂತೆ ರಾಜ್ಯಭಾರವನ್ನು ತ್ಯಜಿಸಿ, ವೈರಾಗ್ಯ ಸಂಪನ್ನನಾದ.

ಪ್ರಿಯವ್ರತ ಮಹಾರಾಜ ಗೈದ ಅತ್ಯಗಾಧ ಕರ್ಮಗಳನ್ನು ಸರ್ವಶಕ್ತಿಯಿಂದ ಕೂಡಿದ ಸರ್ವೇಶ್ವರನ ವಿನಃ ಇನ್ನಾರೂ ಮಾಡಲಾರರು. ಆತ ಪೃಥ್ವಿಯನ್ನು ವಿಭಾಗಿಸಿ ರಚಿಸಿದ ಸಪ್ತ ದ್ವೀಪಗಳೂ ಸಪ್ತಸಮುದ್ರಗಳೂ ಆತನ ಅಲೌಕಿಕ ಕಾರ್ಯಗಳು. ಪ್ರತಿಯೊಂದರಲ್ಲಿಯೂ ಪ್ರತ್ಯೇಕ ಪರ್ವತಗಳನ್ನೂ, ನದಿಗಳನ್ನೂ, ವನಗಳನ್ನೂ ರಚಿಸಿ, ಅವುಗಳ ಸೀಮೆಯನ್ನು ನಿರ್ಧರಿಸಿ, ಒಬ್ಬೊಬ್ಬರ ಅಧೀನಕ್ಕೆ ಅವುಗಳನ್ನು ಒಳಪಡಿಸಿದ. ಭಗವದ್ಭಕ್ತರಾದ ನಾರದರ ಮೆಚ್ಚಿನ ಶಿಷ್ಯನಾದ ಪ್ರಿಯವ್ರತ, ಪಾತಾಳ, ದೇವಲೋಕ ಮತ್ತು ಮರ್ತ್ಯಲೋಕದ ಏಕಛತ್ರಾಧಿಪತಿಯಾಗಿದ್ದಾಗಲೂ ಕರ್ಮ ಮತ್ತು ಯೋಗ ಬಲದಿಂದ ಹೊಂದಿದ ಅತುಲೈಶ್ವರವನ್ನು ಪಡೆದೂ, ಅದನ್ನು ನರಕಕ್ಕೆ ಸಮಾನವೆಂದು ಬಗೆದು ವಿರಕ್ತನಾದನು.

ಈತನ ಮೊಮ್ಮಗ 'ನಾಭಿ' ಯೂ ಅಷ್ಟೇ ಉದಾರ ಚರಿತನಾಗಿದ್ದನು. 'ರಾಜರ್ಷಿ' ಎನಿಸಿಕೊಂಡನು. ಆತನ ಪವಿತ್ರಕರ್ಮಗಳಿಂದ ಸಂತುಷ್ಟನಾದ ಪರಮಾತ್ಮ, ಆತನಿಗೆ ಮಗನಾಗಿ ಜನಿಸಿದ. 'ಭಗವಾನ್ ಋಷಭದೇವ'ನೆಂದು ಹೆಸರಾದ. ಆತನೂ ಈ ಅಜನಾಭ ಖಂಡವನ್ನು ಕರ್ಮಭೂಮಿಯೆಂದೇ ತಿಳಿದು ಲೋಕಸಂಗ್ರಹಕ್ಕಾಗಿ ಕೆಲ ಕಾಲ ಗುರುಕುಲದಲ್ಲಿ ವಾಸಮಾಡಿ ಆ ತರುವಾಯ ಗೃಹಸ್ಥಾಶ್ರಮಿಯಾಗಿ ಜನತೆ ಮೆಚ್ಚುವಂತಹ ಗೃಹಸ್ಥ ಧರ್ಮವನ್ನೂ, ರಾಜ್ಯ ಧರ್ಮವನ್ನೂ

ಪಾಲಿಸಿ, ಅಖಂಡ ಕೀರ್ತಿ ಪಡೆದುದಲ್ಲದೆ, ತನ್ನಂತಹ ಗುಣಶಾಲಿಯಾದ ಮಕ್ಕಳನ್ನು ಪಡೆದು ತನ್ನ ಅವತಾರ ಕಾರ್‍ಯ ಸಮಾಪ್ತಿಗೈದನು. ಆತನ ಮಕ್ಕಳಲ್ಲಿ ಮಹಾ ತಪಸ್ವಿಯಾದ 'ಭರತ'ನು ಈ ಅಜನಾಭ ಖಂಡವನ್ನು ಆಳಿದನು. ಆತನ ನಿಷ್ಕಳಂಕ ಚಾರಿತ್ರ್ಯ, ಅದ್ವಿತೀಯ ಸಾಮರ್ಥ್ಯ, ಅತ್ಯಂತ ವಾತ್ಸಲ್ಯ ಪೂರ್ಣ ಪ್ರಜಾರಂಜನೆ, ಇವುಗಳನ್ನರಿತ ಪ್ರಜೆಗಳು ಇದನ್ನು 'ಭರತವರ್ಷ'ವೆಂದು ಕರೆದರು

ಶ್ರೀ ಋಷಭದೇವನು ತನ್ನ ಮಕ್ಕಳಿಗೆ ಇತ್ತ ಉಪದೇಶ ಎಷ್ಟು ಅರ್ಥಪೂರ್ಣವಾಗಿದೆ! ತಿಳಿದುಕೊಂಡು ನಡೆಯುವವರಿಗೆ ಅದು ಈಗಲೂ ಮಾರ್ಗದರ್ಶಿಯಾಗಿದೆ.

"ಈ ಮರ್ತ್ಯಲೋಕದಲ್ಲಿ ಮನುಷ್ಯ ಶರೀರ ದುಃಖಮಯವಾದ ವಿಷಯಭೋಗ ಪ್ರಾಪ್ತಿಗಾಗಿ ಅಲ್ಲ. ಇಂಥ ಭೋಗಗಳನ್ನು ಹೊಲಸು ತಿನ್ನುವ ಸೂಕರ ಕೂಕರಗಳೂ ಭೋಗಿಸುತ್ತವೆ. ಈ ಶರೀರದಿಂದ ಅಂತಃಕರಣ ಶುದ್ಧಿಗಾಗಿ ದಿವ್ಯ ತಪಸ್ಸು ಸಾಧಿಸಬೇಕು. ಇದರಿಂದ ಅನಂತ ಬ್ರಹ್ಮಾನಂದದ ಪ್ರಾಪ್ತಿ ಸಾಧ್ಯ. ಮಹಾಪುರುಷರ ಸೇವೆಯಿಂದ ಮುಕ್ತಿ ದೊರೆತರೆ, ಸ್ತ್ರೀ ಲಂಪಟರ ಸಂಗದಿಂದ ನರಕ ಪ್ರಾಪ್ತಿ; ಎಂದು ಸಾರಿ ಹೇಳುತ್ತವೆ, ಸಮಾನ ಚಿತ್ತರೂ, ಪರಮಶಾಂತರೂ, ಕ್ರೋಧ ಹೀನರೂ. ಎಲ್ಲರ ಹಿತಚಿಂತಕರೂ, ಸದಾಚಾರ ಸಂಪನ್ನರೂ ಆದವರೇ ಮಹಾಪುರುಷರು. ಅವರು ಕೇವಲ ಶರೀರ ನಿರ್ವಾಹಕ್ಕಾಗಿಯೇ ಕಾರ್‍ಯ ಪ್ರವೃತ್ತರಾಗುತ್ತಾರೆ. ಕಾಮ್ಯ ಕರ್ಮಗಳಿಂದ ಕ್ರಮೇಣ ನಿವೃತ್ತಿ ಹೊಂದಿ, ಪರಮಾತ್ಮನ ಅನುಗ್ರಹವೇ ಪರಮ ಪುರುಷಾರ್ಥವೆಂದು ಬಗೆಯುತ್ತಾರೆ. ಯಾರು ಇತರರಿಗೆ ಭಗವದ್ಭಕ್ತಿಯ ಉಪದೇಶವಿತ್ತು ಮೃತ್ಯು ಪಾಶದಿಂದ ಬಿಡಿಸುವುದಿಲ್ಲವೋ ಅಂಥವರು ಗುರುಗಳೇ ಇರಲಿ, ಸ್ವಜನರಿರಲಿ, ತಂದೆ-ತಾಯಿಗಳಿರಲಿ ಇಷ್ಟದೇವತೆ ಇರಲಿ, ಇಲ್ಲವೇ ಗಂಡನಿರಲಿ, ಅವರು ಸರ್ವಥಾ ತ್ಯಾಜ್ಯರು.

ಮಕ್ಕಳೇ! ನೀವು ಸಕಲ ಚರಾಚರ ಪ್ರಾಣಿಗಳಲ್ಲಿ ಪರಮಾತ್ಮನನ್ನೇ ಕಾಣಿರಿ. ಹೆಜ್ಜೆ ಹೆಜ್ಜೆಗೆ ಅವರ ಸೇವೆ ಮಾಡಿರಿ. ಇದುವೇ ನಿಜವಾದ ಪೂಜೆ. ಮನಸ್ಸು, ವಚನ, ದೃಷ್ಟಿ ಮತ್ತು ಅನ್ಯ ಇಂದ್ರಿಯಗಳ ಕಾರ್ಯದಿಂದ ಸಿಗತಕ್ಕ ಫಲವು ಈ ರೀತಿಯ ಪೂಜೆ-ಯಿಂದಲೇ ಸಾಧ್ಯ. ಇದರ ವಿನಃ ಮನುಷ್ಯ ಮಹಾ ಮೋಹಮಯ ಕಾಲ ಪಾಶದಿಂದ ಮುಕ್ತಿಹೊಂದಲಾರ."

ಇಂಥ ಇನ್ನೂ ಅನೇಕ ವಿಷಯಗಳನ್ನುಕುರಿತು ಬೋಧಿ
ಋಷಭದೇವನ ಚರಿತ್ರೆಯನ್ನು ನೆನೆಯುತ್ತ ಆ ಕಾ
ಜನರು ಈ ರೀತಿ ಹೆಮ್ಮೆಯಿಂದ ನುಡಿಯುತ್ತಿದ್ದರ
"ಭಾರತ ವರ್ಷ"ವೇ ಶ್ರೇಷ್ಠ ಪುಣ್ಯಭೂಮಿ ! ಇಲ್ಲಿ
ಜನರು ಪರಮಾತ್ಮನ ಮಂಗಲಮಯ ಅವತಾರ ಚರಿತ್ರೆ
ಗಾಯನ ಮಾಡುತ್ತಾರೆ. ರಾಜರಂತೂ ಪ್ರಜೆಗಳ ಸವ
ಕಲ್ಯಾಣವೇ ತಮ್ಮ ಕೈವಲ್ಯವೆಂದು ಬಗೆದು ಅಹನಿ
ಅವರ ಶುಭ ಚಿಂತನೆಯನ್ನೇ ಮಾಡುತ್ತಿರುತ್ತಾರೆ. ಮ
ರಾಜ ಪ್ರಿಯವ್ರತನ ವಂಶ ಬಹು ಉಜ್ಜ್ವಲ ಮ
ಸುಯಶಪೂರ್ಣವಾದುದು. ಆ ವಂಶದಲ್ಲಿ ಪುರಾಣ ಪು
ಶ್ರೀ ಆದಿನಾರಾಯಣನು ಋಷಭಾವತಾರ ತಾಳಿ, ಮೋ
ಪ್ರಾಪ್ತಿಯ ಪಾರಮಹಂಸ್ಯ ಧರ್ಮದ ಆಚರಣೆಗೈದನು.

ಭಾರತವರ್ಷದಲ್ಲಿ ಜನಿಸಿದ ಮನುಷ
ಮಹಿಮೆಯನ್ನು ದೇವತೆಗಳೂ ಈ ರೀತಿ ಹೊಗಳುತ್ತಾ
"ಯಾವ ಜೀವಿಗಳು ಭಾರತವರ್ಷದಲ್ಲಿ ಪರಮಾತ್ಮನಸೇ
ಯೋಗ್ಯವಾದ ಮನುಷ್ಯ ಜನ್ಮವನ್ನು ಪಡೆದಿದ್ದಾರೋ
ಅವರೆಂಥ ಪುಣ್ಯಶಾಲಿಗಳು ! ಅಥವಾ ಭಗವಂತ ಅ
ಮೇಲೆ ಸಂಪೂರ್ಣ ಪ್ರಸನ್ನನಾಗಿದ್ದಾನೆಯೋ ? ನಾ
ಈ ಪರಮ ಸೌಭಾಗ್ಯಕ್ಕಾಗಿ ನಿತ್ಯ-ನಿರಂತರ ಹಂಬಲಿ
ತ್ತೇವೆ. ಕಠಿಣವಾದ ತಪಸ್ಸು, ವ್ರತ ಮತ್ತು ದಾನ
ಗಳಿಂದ ನಮಗೆ ಸಿಕ್ಕದ್ದೇನು? ಈ ತುಚ್ಛ ಸ್ವರ್ಗಾಧಿಕಾ
ಇದರಿಂದೇನು ಪ್ರಯೋಜನ ? ಇಲ್ಲಿ ಇಂದ್ರಿಯ ಭೋ
ಆಧಿಕ್ಯದಿಂದಾಗಿ ಸ್ಮೃತಿಶಕ್ತಿ ನಷ್ಟವಾಗುತ್ತದೆ. ಅದರಿ
ಪರಮಾತ್ಮನ ಪಾದಾರವಿಂದಗಳ ಸ್ಮೃತಿಯೇ ಉಳಿಯ
ವುದಿಲ್ಲ. ಸ್ವರ್ಗವಾಸಿಗಳು ಒಂದು ಕಲ್ಪ ಪರ್ಯ
ಆಯುಸ್ಸನ್ನು ಹೊಂದಿದ್ದರೂ ಆ ತರುವಾಯ ಪು
ಅವರು, "ಕ್ಷೀಣೇ ಪುಣ್ಯೇ ಮರ್ತ್ಯಲೋಕೇ ವಿಶಂತಿ" ಎಂ
ಹಾಗೆ, ಸಂಸಾರ ಚಕ್ರದಲ್ಲಿ ಸಿಲುಕಲೇ ಬೇಕು. ಆದ
ಭರತ ಭೂಮಿಯಲ್ಲಿ ಅಲ್ಪಾಯುಷಿಗಳಾಗಿಯಾದರೂ ಜೀ
ಸುವುದು ಲೇಸು. ಏಕೆಂದರೆ ಇಲ್ಲಿ ಧೀರ ಪುರುಷರು ಒಂ
ಕ್ಷಣದಲ್ಲಿಯೇ ತಮ್ಮ ಈ ಮರ್ತ್ಯ ಶರೀರದಿಂದ ಗೈ
ಸಂಪೂರ್ಣ ಕರ್ಮವನ್ನು ಭಗವಂತನಿಗೆ ಅರ್ಪಿಸಿ, ಆತ
ಅಭಯ ಪದವನ್ನು ಹೊಂದುತ್ತಾರೆ " ಇದು ಯಾವಾ
ಪ್ರತಿಯೊಬ್ಬರೂ ಅಂಥ ಆಚರಣೆಗೈದಾಗ ಅಲ್ಲವೇ ?

ಕೇವಲ ಪ್ರಿಯವ್ರತನ ವಂಶವೇ ಹೀಗಿತ್ತೆಂ
ತಿಳಿಯಕೂಡದು. ಕಲಿಯುಗದ ಆರಂಭದವರೆಗೂ ಇಂ
ರಾಜ-ಮಹಾರಾಜರು ಭರತಖಂಡವನ್ನಾಳಿ, ಅಜರಾಮ

ಕೀರ್ತಿಪಡೆದಿದ್ದಾರೆ. ಅವರಲ್ಲಿ ಪ್ರಹ್ಲಾದ, ಪೃಥು, ನಾಭಾಗ, ಅಂಬರೀಷ, ಹರಿಶ್ಚಂದ್ರ, ಸಗರ, ನಿಮಿ, ದುಷ್ಯಂತ, ಭರತ, ರಾಮ, ಧೃತರಾಷ್ಟ್ರ, ಪರೀಕ್ಷಿತ, ಜನಮೇಜಯ ಮುಂತಾದವರ ಹೆಸರನ್ನು ಹೆಮ್ಮೆಯಿಂದ ಸ್ಮರಿಸಬಹುದು.

ದುಷ್ಟನಾದ ಹಿರಣ್ಯಕಶಿಪುವಿನ ಸಂಹಾರಗೈದ ನಂತರ ಶ್ರೀ ನೃಸಿಂಹಸ್ವಾಮಿ, ಪ್ರಹ್ಲಾದನನ್ನು ಕುರಿತು, "ಪರಮ ಕಲ್ಯಾಣ ಸ್ವರೂಪ ಪ್ರಹ್ಲಾದ ! ನಿನಗೆ ಕಲ್ಯಾಣವಾಗಲಿ ! ದೈತ್ಯ ಶ್ರೇಷ್ಠ ! ನಾನು ನಿನ್ನ ಮೇಲೆ ಅತ್ಯಂತ ಪ್ರಸನ್ನನಾಗಿದ್ದೇನೆ. ನಿನಗಿಷ್ಟವಾದುದನ್ನು ಕೇಳು ನಿನ್ನ ಮನೋರಥವನ್ನು ಸಂತೋಷದಿಂದ ಪೂರ್ಣಗೊಳಿಸುತ್ತೇನೆ." ಎಂದು ನುಡಿದನು. ಅಸುರ ಕುಲಭೂಷಣನಾದ ಪ್ರಹ್ಲಾದ ಯಾವ ಪ್ರಲೋಭನೆಗೂ ಒಳಗಾಗದೆ ಈ ರೀತಿ ನುಡಿದ. "ಸ್ವಾಮಿ! ನೀನು ನನ್ನ ಭಕ್ತಿಯನ್ನೂ, ನಿನ್ನಲ್ಲಿಟ್ಟ ರತಿಯನ್ನೂ ಪರೀಕ್ಷಿಸುವಂತಿದೆ. ನಾವು ಮೊದಲೇ ಅಸುರರು. ಜನ್ಮದಿಂದಲೇ ವಿಷಯ ಭೋಗಾಸಕ್ತರು. ನೀನು ಇಂಥ ವರಗಳ ದ್ವಾರಾ ನನ್ನ ಮನಸ್ಸನ್ನು ಆಕರ್ಷಿಸಬೇಡ. ಆ ಭೋಗಗಳ ಸಂಗದಿಂದ ಆಗತಕ್ಕ ತೀವ್ರ ವೇದನೆಗಳ ಅನುಭವ ಹೊಂದಿಯೇ ಅವುಗಳಿಂದ ಬಿಡುಗಡೆ ಹೊಂದುವ ಉದ್ದೇಶದಿಂದಲೇ ನಿನ್ನಲ್ಲಿ ಶರಣು ಬಂದಿದ್ದೇನೆ. ವಿಷಯ ಭೋಗಗಳನ್ನು ಇಚ್ಛಿಸಿ, ತಪಸ್ಸಿನ ಮೂಲಕ ಬ್ರಹ್ಮದೇವನನ್ನೂ ಒಲಿಸಿ, ಮೂರು ಲೋಕಗಳ ಸಮಸ್ತ ಭೋಗಗಳನ್ನೂ ಮನಸ್ವೀ ಉಪಭೋಗಿಸಿದ ನಮ್ಮ ತಂದೆಯ ಗತಿ ಏನಾಯಿತು? ಹೇಗೆ ಬಿದ್ದಿದ್ದಾನೆ ನೋಡಿಲ್ಲಿ, ಅಸಹಾಯಕನಾಗಿ ಈ ರಕ್ತದ ಮಡುವಿನಲ್ಲಿ! ನೀನು ಕೇವಲ ನನ್ನನ್ನು ಪರೀಕ್ಷಿಸುವುದಕ್ಕಾಗಿಯೇ ಈ ರೀತಿ ಪ್ರಶ್ನಿಸುತ್ತಿರುವಂತಿದೆ. ಭಕ್ತನಾದ ನನ್ನನ್ನು ನೀನು ಎಂದಾದರೂ ವಿಷಯ ಭೋಗಗಳಲ್ಲಿ ಸಿಲುಕಿಸಬಹುದೆ? ಯಾವ ಸೇವಕನು ನಿನ್ನಿಂದ ತನ್ನ ಇಚ್ಛೆಗಳನ್ನು ಪೂರ್ತಿಗೊಳಿಸಿ ಕೊಳ್ಳುತ್ತಾನೊ, ಅವನು ಸೇವಕನಲ್ಲ. ಅವನು ಕೊಡು-ಕೊಳ್ಳುವ ವ್ಯವಹಾರ ಗೈವ ವ್ಯಾಪಾರಿ. ಯಾವ ಸ್ವಾಮಿಯು ತನ್ನ ಸೇವಕನಿಂದ ಕೆಲಸ ತೆಗೆದುಕೊಂಡು, ತಾನು ಆತನ ಸ್ವಾಮಿಯಾಗಿ ಮೆರೆಯಲು ಆತನ ಅಭೀಷ್ಟವನ್ನು ಪೂರೈಸುತ್ತಾನೋ, ಆತ ಸ್ವಾಮಿಯಲ್ಲ ! ನಾನು ನಿನ್ನ ನಿಷ್ಕಾಮ ಸೇವಕ, ನೀನು ನನ್ನ ನಿರಪೇಕ್ಷ ಸ್ವಾಮಿ ! ರಾಜನ ಮತ್ತು ಸೇವಕನ ಸಂಬಂಧ ಪ್ರಯೋಜನವಶ ಸ್ವಾಮಿ-ಸೇವಕ ಸಂಬಂಧದಂತಿರುತ್ತದೆ' ಆದರೆ ನನ್ನ ನಿನ್ನ ಸಂಬಂಧ ಹಾಗಲ್ಲ. ಕಾರಣ ವರದಾನ ಶಿರೋಮಣಿಯೆಂದು ಪ್ರಸಿದ್ಧಿ ಹೊಂದಿದ ಸ್ವಾಮಿಯೇ ನನಗಿಷ್ಟವಾದ ವರವನ್ನು ಕೊಡುವ ಇಚ್ಛೆ ನಿನಗಿದ್ದರೆ, ನನ್ನ ಹೃದಯದಲ್ಲಿ ಎಂದೆಂದೂ ಯಾವ ಕಾಮನೆಯ ಬೀಜವೂ ಅಂಕುರಿಸಬಾರದು. ಅಂಥ ವರವನ್ನುಕೊಡು. ಏಕೆಂದರೆ, ಹೃದಯದಲ್ಲಿ ಇಚ್ಛೆಯ ಉದಯವಾದ ಕೂಡಲೇ ಇಂದ್ರಿಯ ಮನಸ್ಸು, ಪ್ರಾಣ, ದೇಹ, ಧರ್ಮ ಧೈರ್ಯ,ಬುದ್ಧಿ,ಲಜ್ಜೆ,ತೇಜ,ಸ್ಮೃತಿ ಮತ್ತು ಸತ್ಯ ಇವೆಲ್ಲವು ನಷ್ಟ ಹೊಂದುತ್ತವೆ. ಇವೆಲ್ಲ ನಷ್ಟ ಹೊಂದಿದ ಮೇಲೆ ಉಳಿದುಕೊಳ್ಳುವುದೇನು ?" ಆಗ. ನೃಸಿಂಹ ಸ್ವಾಮಿ ಆತನ ಅನನ್ಯ ಭಕ್ತಿಗೆ ಮೆಚ್ಚಿ, ನೀನೇ ಈ ರೀತಿ ಕೇಳಬಹುದೆಂದು ನಾನೆಂದೋ ಅರಿತಿದ್ದೆ. ಆದರೂ ಹೆಚ್ಚು ಬೇಡ. ಕೇವಲ ಒಂದು ಮನ್ವಂತರದವರೆಗೆ ನನ್ನ ಪ್ರಸನ್ನತೆಗಾಗಿ ಈ ಲೋಕದಲ್ಲಿಯ ದೈತ್ಯಾಧಿಪತಿಗಳ ಸಮಸ್ತ ಭೋಗಗಳನ್ನೂ ಸ್ವೀಕರಿಸು ಎಂದು ನುಡಿದನು. ಆ ಕಾಲದವರು ರಾಜ್ಯವನ್ನು ಪಡೆದುಕೊಳ್ಳುವ ರೀತಿಯಿದು ! ತ್ಯಾಗದಲ್ಲಿಯೂ ಭೋಗದ ವೈಖರಿಯಿದು !

ಪ್ರಹ್ಲಾದ ಕೊನೆಯಲ್ಲಿ ಒಂದು ವರ ಕೇಳಿದ. "ಸ್ವಾಮಿ ! ನನ್ನ ತಂದೆಯ ಸಕಲ ತಪ್ಪುಗಳನ್ನೂ ಮನ್ನಿಸಿ ಉದ್ಧರಿಸು ! ಆತ ನಿನ್ನ ದರ್ಶನ ಮಾತ್ರದಿಂದಲೇ ಪವಿತ್ರನಾಗಿ ಹೋದ. ಆದರೂ ಆತ ನಿನ್ನ ಈಶ್ವರೀಯ ತೇಜ ಮತ್ತು ಸಾಮರ್ಥ್ಯವನ್ನರಿಯದೆ ನಿಂದೆ ಗೈದ. ಇದರಿಂದಾಗಿ ಆತ ತೀವ್ರನಾಶವಾಗದ ದುಸ್ತರ ದೋಷದಲ್ಲಿ ಮುಳುಗಿದ. ಅದರಿಂದ ಆತ ಶುದ್ಧನಾಗುವಂತೆ ಅನುಗ್ರಹಿಸು! "ಎಂದು ಬೇಡಿಕೊಂಡ. ಅದಕ್ಕೆ ನಾರಸಿಂಹ "ನಿಷ್ಪಾಪ ಪ್ರಹ್ಲಾದ! ನಿನ್ನಂತಹ ಕುಲೋದ್ಧಾರಕ ಸತ್ಪುತ್ರ ಜನಿಸಿದಾಗ, ಆತನಷ್ಟೇ ಏಕೆ, ಇಪ್ಪತ್ತೊಂದು ತಲೆಮಾರಿನ ಪಿತೃಗಳಿದ್ದರೂ ಪವಿತ್ರರಾಗಿ ಮುಕ್ತಿಹೊಂದುತ್ತಿದ್ದರು ! ಆತನ ಬಗ್ಗೆ ಚಿಂತಿಸಬೇಡ. ಆತ ಇಂದೇ ಪವಿತ್ರನಾಗಿ ಹೋದ." ಎಂದು ಅಭಯವಿತ್ತ. ಚಿತ್ರಹಿಂಸೆ ಕೊಟ್ಟಿದ್ದ ತಂದೆಯ ಬಗೆಗೆ ತೋರಿದ ಅನುಕಂಪವೆಂತಹುದು ನೋಡಿರಿ ! ಇಂಥ ಸ್ವಭಾವ ಅಳವಡಬೇಕಾದರೆ ಅದೆಂಥ ತಪಸ್ಸು ಬೇಕೋ! ಇಂದಿನ ನಮ್ಮ ಶಾಸಕರು, ಮಂತ್ರಿಗಳಾಗಲು,

ನಡೆಸುವ ಪೈಪೋಟಿ ನೋಡಿದರೆ ಅಯ್ಯೋ ಎನಿಸುತ್ತದೆ.

ಪುರಾಣ ಕಾಲದಿಂದ ಮೊನ್ನೆಯವರೆಗೂ, ಈ ಇತಿಹಾಸ ಕಾಲದಲ್ಲಿಯೂ ಇಂಥ ರಾಜ-ಮಹಾರಾಜರು ಹುಟ್ಟಿ, ಆಳಿ, ದೇಶವನ್ನು, ರಾಜ್ಯವನ್ನು ಸುಭಿಕ್ಷ ರಾಜ್ಯವನ್ನಾಗಿ ಮಾಡಿದ್ದನ್ನು ಇತಿಹಾಸದಲ್ಲಿ ಓದಿಲ್ಲವೇ ? ಹರ್ಷವರ್ಧನ, ಅಶೋಕ, ನೃಪತುಂಗದೊರೆ, ಹೊಯ್ಸಳ ಚಕ್ರವರ್ತಿ, ಪುಲಕೇಶಿ, ಕೃಷ್ಣದೇವರಾಯ, ಇಂಥ ಎಷ್ಟು ಜನ ಬೇಕು ? ಮೊನ್ನೆ ತಾನೇ ನಿಧನ ಹೊಂದಿದ ಶ್ರೀ ಚಾಮರಾಜಒಡೆಯರನ್ನು ಕನ್ನಡನಾಡಿನ ಜನತೆ, ತನ್ನ ಕಣ್ಮಣಿಯಾಗಿ ಏಕೆ ಕಂಡಿತು? ಅವರ, ಅವರ ಹಿರಿಯರ ಉದಾರ ಚಾರಿತ್ರ್ಯದಿಂದಾಗಿ ಅಲ್ಲವೆ ?

ಪ್ರಜಾರಾಜ್ಯ ಉದಯವಾಗಿ ನಮ್ಮ ಶಾಸಕರು ರಾಜ್ಯ ಸೂತ್ರವನ್ನು ತಮ್ಮ ಕೈಯಲ್ಲಿರಿಸಿಕೊಂಡು ನಡೆಸಿದ ದುರಾಡಳಿತವನ್ನು ನೋಡಿದರೆ ಎಂಥವರಿಗೂ ನಾಚಿಕೆಯಾಗುತ್ತದೆ. ಈ ರಾಜ್ಯಭಾರದಲ್ಲಿ ಸ್ವಾರ್ಥ, ಸ್ವಜನ ಪಕ್ಷಪಾತ, ಸ್ವಹಿತಚಿಂತನ, ಶೀಲಭ್ರಷ್ಟತೆ, ಪರವಿತ್ತಾಪಹರಣ, ಕಾಯಕದಲ್ಲಿ ನಿಷ್ಠೆಯ ಅಭಾವ, ಆಲಸ್ಯಮನೋವೃತ್ತಿ, ಪ್ರತಿಯೊಂದು ಕಾರ್ಯವೂ ಸರಕಾರದಿಂದಲೇ ನಡೆಯಬೇಕೆಂಬ ಛಲ ಮತ್ತು ವ್ಯಾಪಾರೀ ಮನೋವೃತ್ತಿ, ಕರಭಾರದಿಂದ ಜನತೆಯ ಶೋಷಣೆ, ಧರ್ಮದ ಅಸ್ತಿಭಾರವಿಲ್ಲದ ರಾಜ್ಯಸೂತ್ರ, ಇವು ಕರಾಳ ತಾಂಡವ ನಡೆಸಿವೆ. ಇದರಿಂದಾಗಿ ಜನತೆ ಕಂಗಾಲಾಗಿದೆ; ಸತ್ವವನ್ನೇ ಕಳೆದುಕೊಂಡಿದೆ. ಎಲ್ಲೆಲ್ಲಿಯೂ ಅಶಾಂತಿ ಗಲಭೆ ಹೆಚ್ಚಿದೆ. ಒಂದು ಮಹಾಕ್ರಾಂತಿಗೆ ಈ ಶಾಸನ ಮಾರ್ಗಮಾಡಿಕೊಡಲಿದೆಯೋ, ಏನೋ ! ಎನ್ನುವಂತಿದೆ. ಇಂಥ ಸಂದಿಗ್ಧ ಪರಿಸ್ಥಿತಿಯ ಸೂಕ್ಷ್ಮತೆಯನ್ನರಿತು, ಭರತಖಂಡದಂತಹ ಪವಿತ್ರ-ಪುಣ್ಯಭೂಮಿಯಲ್ಲಿ ಜನಿಸಿದ ಇಂದಿನ ನಮ್ಮ ಶಾಸಕರು, ಮಂತ್ರಿ ಮಹಾ-ಜನರು, ಅಧಿಕಾರಿಗಳು ಹಿಂದಿನವರಿಂದ ಒಳ್ಳೆಯ ಪಾಠಕಲಿತು ಪರಿಶುದ್ಧ ಆಡಳಿತವನ್ನು ಒದಗಿಸಲು ಪ್ರಯತ್ನಿಸಬಾರದೆ ? ಈ ಒಂದು ಪ್ರಯತ್ನ ನಡೆದದ್ದಾದರೆ ದೇಶದ ಸ್ವರೂಪವೇ ಬದಲಾದೀತು ! ಮಹಾತ್ಮ ಗಾಂಧಿಯವರ ಕನಸಿನ " ರಾಮರಾಜ್ಯ ನನಸಾದೀತು! 'ಸಂಕ್ರಾಂತಿ ಕಾಲ' ಅಳಿದು 'ವಸಂತ ಕಾಲ' ಬಂದೀತು ! ಆಗ ಶ್ರೀ ಜಯಪ್ರಕಾಶನಾರಾಯಣರೂ ಬೆರಳು ಮಾಡಿ ತೋರಿಸಲಾರರು. ಪೂಜ್ಯ ವಿನೋಬಾ ಭಾವೆಯಂತಹವರೂ ನಿರಾಸೆಯ ಉಸಿರು ಬಿಡಲಾರರು.

ಈಗಿನ ಮಂತ್ರಿಮಂಡಲಗಳಲ್ಲಿಯೂ ಒಳ್ಳೆಯವರಿಲ್ಲವೆಂದಲ್ಲ. ಕೆಲವರಿರಬಹುದು; ಆದರೆ ಅವರ ಒಳ್ಳೆಯತನದ ಪ್ರಕಾಶನಕ್ಕೆ ಆಸ್ಪದವಿಲ್ಲದಂತಾಗಿದೆ. ಹಾಗೇನಾದರೂ ಅವರು ತಮ್ಮ ಒಳ್ಳೆಯತನವನ್ನು ಪ್ರಕಾಶಿಸಹೋದರೆ ಮಂತ್ರಿ ಪದ ಕಳೆದುಕೊಂಡಾರು ! ಹಿಂದೆ ಕೆಲವರು ತಮ್ಮ ಮಂತ್ರಿಪದ ಕಳೆದುಕೊಂಡು ರಾಜಕಾರಣಕ್ಕೇ ಶರಣು ಹೊಡೆದ ಕೆಲ ಉದಾಹರಣೆಗಳಿವೆ. ಇಂಥ ಮೋಸ, ವಂಚನೆ ಮತ್ತು ತುಳಿತದ ಭಯ ತೊಲಗಬೇಕು.

ಹಿಂದಿನ ರಾಜರು ತಮ್ಮ ಮಕ್ಕಳು ಯೋಗ್ಯರಾಗಿ ಹೊರಟಾಗ, ತಾವು ಸಂನ್ಯಾಸ ದೀಕ್ಷೆ ಹೊಂದಿ, ಮಕ್ಕಳಿಗೆ ರಾಜ್ಯಭಾರವನ್ನೊಪ್ಪಿಸಿ, ತಪಸ್ಸಿಗೆ ಹೋದ ವಿಷಯವನ್ನು ಮೇಲೆ ನೋಡಿದ್ದೇವೆ. ಮಕ್ಕಳಾದರೂ ತಮ್ಮ ಪೂರ್ವಜರ ಕೀರ್ತಿ ಉಳಿಸಿ, ಬೆಳೆಸಲು ಹೆಣಗಿದುದನ್ನು ನೋಡಿದ್ದೇವೆ. ಇದೇ ರೀತಿ ಮಹಾತ್ಮಗಾಂಧಿಯವರೂ ರಾಷ್ಟ್ರವನ್ನು ಸ್ವತಂತ್ರಗೊಳಿಸಿ, ಅದರ ಕಡಿವಾಣವನ್ನು ತಮ್ಮ ಕೈಯಲ್ಲಿರಿಸಿಕೊಳ್ಳದೆ, ತ್ಯಾಗಜೀವನವನ್ನು ನಡೆಸಿ, ರಾಜ್ಯಭಾರವನ್ನು ತಮ್ಮ ಉತ್ತರಾಧಿಕಾರಿಗಳ ಕೈಗಿತ್ತು, ಋಷಭದೇವನಂತೆ ಅವರೂ ಬುದ್ಧಿವಾದ ಹೇಳಿದರೂ, ಈಗಿನ ರಾಜಕಾರಣಿಗಳು ಸತ್ವಶಾಲೀ ಪ್ರಬುದ್ಧ ಮಕ್ಕಳಿಗೆ ರಾಜ್ಯಭಾರವನ್ನೊಪ್ಪಿಸಿ ತಾವು ರಾಜಕಾರಣದಿಂದ ನಿವೃತ್ತರಾಗಲು ಒಲ್ಲರು. ಹದ್ದಿನ ಆಯುಷ್ಯ ಹೊತ್ತು, ತಾವೇ ನಿರಂಕುಶ ಪ್ರಭುಗಳಾಗಿ ಬಾಳ ಬೇಕೆಂದು ಹಂಬಲಿಸುತ್ತಿರುವುದು ಇಂಥ ಅನರ್ಥಗಳಿಗೆ ಎಡೆಗೊಟ್ಟಿದೆ. ಇನ್ನೂ ಈ ಸ್ಥಿತಿ ಎಲ್ಲಿಗೆ ಮುಟ್ಟುವುದೋ ? ಈ ಭ್ರಷ್ಟಾಚಾರ, ಕಾಳಸಂತೆ, ಅದಕ್ಷ ಆಡಳಿತ ದೇಶವನ್ನೂ, ದೇಶದ ಜನತೆಯನ್ನೂ ಎಲ್ಲಿಗೆ ಒಯ್ದು ಮುಟ್ಟಿಸುವುದೋ ? ಭಗವಂತನೇ ಬಲ್ಲ !

( ಸೂಚನೆ :– ಈ ಲೇಖನ ತುರ್ತುಪರಿಸ್ಥಿತಿಯ ಕಾಲದಲ್ಲಿ ಬರೆದದ್ದು. ಈಗ ಯಥಾವತ್ತಾಗಿ ಪ್ರಕಟವಾಗಿದೆ ( —

# ದ ಯಾ ಸಾ ಗ ರ

ಭಾರತೀಯ ಜಾನಪದ ಕಥೆ

**ತ್ಯಾಗ ದೊಡ್ಡದಾದರೆ ದೇವರ ದಯೆಯೂ ದೊಡ್ಡದೇ ಆಗಿರುತ್ತದೆ. ನಿರ್ವಿಕಾರ ಚಿತ್ತನಾಗದ ಹೊರತು ಯಾರೇ ಆಗಲಿ ದೇವರ ದಯೆಗೆ ಅರ್ಹನಾಗಲಾರ.**

ಮಾಂಥನ್ ಒಬ್ಬ ಹುಲ್ಲು ಕೊಯ್ಯುವವ. ಸುಮಾರು ಮೂವತ್ತು ವರ್ಷಗಳಿಂದ ಹುಲ್ಲು ಕೊಯ್ದು ಮಾರಿ ಉಪಜೀವನ ನಡೆಸುತಿದ್ದ. ಬಹಳ ಶ್ರಮ ಎನಿಸಿ ಎನಿಸಿ ಅವ ದುರ್ಬಲನಾಗಿದ್ದ. ಅಶಕ್ತತೆ ಹೆಚ್ಚಿದಂತೆ ಸಹಿಷ್ಣುತೆ ಕಡಿಮೆ ಆಗತೊಡಗಿತು.

ಈಗ ಚಿಂತೆ ಹೆಚ್ಚಿ ನಾಳಿನ ಗತಿ ಏನೆಂದು ದೇವರನ್ನ ಧ್ಯಾನಿಸ ತೊಡಗಿದ. ತನ್ನ ಜೀವನವು ಹೀಗೇಕೆ ದುರ್ಬಲವಾಯಿತೆಂದು ಚಿಂತಿಸ ತೊಡಗಿದ. ಒಂದು ದಿನ ಅವನು ಹೀಗೆ ಕಾಲು ಎಳೆಯುತ್ತ ಸಾಗಿದಾಗ, ಕೆಲವು ಜನರು ಗುಂಪು ಕಟ್ಟಿಕೊಂಡು ಮಾತನಾಡುತ್ತ ಕುಳಿತುದನ್ನು ನೋಡಿದ. ಅವರು ಏನು ಮಾತಾಡುತ್ತಿರಬಹುದು ? ಎಂದು ಯೋಚಿಸುತ್ತ ಅವರ ಬಳಿಗೆ ಬಂದು ಕಿವಿಗೊಟ್ಟು ಲಾಲಿಸಿದ—

ಅವರಲ್ಲಿ ಒಬ್ಬನು ಅನ್ನುತ್ತಿದ್ದ. "ದೇವರನ್ನ ನಂಬಿದರೆ ನಮ್ಮ ಚಿಂತೆ ಪರಿಹರಿಸಿ, ಸಂಪತ್ತನ್ನೀಯುವ. ಪ್ರಾಚೀನ ಕಾಲದಿಂದಲೂ ಮುನಿಗಣ ಹೀಗೆಯೇ ದೇವರಿಗೆ ಮೊರೆ ಹೋಗಿ ಸುಖಿಸಿತು."

ಇನ್ನೊಬ್ಬ ನುಡಿದ–, "ಅದೆಲ್ಲ ಜ್ಞಾನಿಗಳ ಮಾತಾಯ್ತು. ಸರ್ವ ಸಾಮಾನ್ಯ ಮನುಷ್ಯನ ಗತಿ ಏನು ? ದೇವರ ಲೀಲಾ ಅವರಿಗೆ ಅರಿವಾಗುವದು ಹ್ಯಾಂಗ ? ಆತನನ್ನ ಹ್ಯಾಂಗ ಆರಾಧಿಸಿಯಾನು ?"

ಮೊದಲಿನವ– "ದೇವರನ್ನ ನಂಬುವದೆಂದ ರೇನು ? ಅವನನ್ನು ಆರಾಧಿಸಲು ದಿವ್ಯಚಕ್ಷು ಜ್ಞಾನ ಲಾಲಸೆಬೇಕಿಲ್ಲ. ಆಹಾರದ ವಿಷಯ ತೆಗೆದುಕೊಂಡರೆ, ಎಲ್ಲರೂ ಅದನ್ನು ಸೇವಿಸುತ್ತಾರೆ. ಒಬ್ಬೊಬ್ಬರಿಗೆ ಅದರ ಬಗೆಗೆ ಒಂದೊಂದು ಭಾವನೆ. ಕೆಲವರು ರುಚಿಗಾಗಿ ತಿನ್ನುವರು. ಕೆಲವರಿಗೆ ಆಹಾರದ ಗುಣ ಧರ್ಮ ತಿಳಿದಿರುವದು. ಕೆಲವರು ಬದುಕಲಾರೆವೆಂದು ತಿನ್ನುವರು. ಪರಿಣಾಮ ಒಂದೇ ಆಗುವದಲ್ಲ !

ಹುಲ್ಲು ಕೊಯ್ಯುವವ ಧೈರ್ಯ ಮಾಡಿ ಅವರನ್ನು ಪ್ರಶ್ನಿಸಿದ– "ಸ್ವಾಮಿ, ನನ್ನಂಥ ಸಾಮಾನ್ಯ ವ್ಯಕ್ತಿ ದೇವರನ್ನು ನಂಬಿದರೆ ಅವ ನನಗೆ ಆಹಾರ ಒದಗಿಸಿಯಾನೆ ?"

ಮೊದಲಿನವ : "ತನ್ನನ್ನು ನಂಬಿದವರನ್ನು ದೇವರು ಕೈ ಬಿಟ್ಟಿಲ್ಲ. ಅವ ದಯಾಸಾಗರ."

ಈ ಮಾತನ್ನು ಕೇಳಿ ಹುಲ್ಲು ಕೊಯ್ಯುವವ ಹೊರಟ ದಾರಿಯಲ್ಲಿ ವಿಚಾರಪರನಾದ- "ಇವರೆಲ್ಲ ಸುಳ್ಳು ಹೇಳಿರಲಿಕ್ಕೆ ಸಾಧ್ಯವಿಲ್ಲ. ನಾನು ಇಂದಿನಿಂದ ಹುಲ್ಲು ಕೊಯ್ದು ಮಾರುವುದನ್ನು ಬಿಟ್ಟು, ದೇವರ ಧ್ಯಾನದಾಗ ಮಗ್ನ ಆಗತೇನಿ "

ಅನೇಕ ಟೊಂಗೆಗಳಿದ್ದ ದಟ್ಟವಾದ ಗಿಡ ಒಂದನ್ನು ಆಯ್ದುಕೊಂಡು ಆಶ್ರಯಿಸಿದ. ತನ್ನ ಬುಟ್ಟಿಯನ್ನು ಟೊಂಗೆಗೆ ತೂಗುಬಿಟ್ಟ. ಕೊಯ್ತುವನ್ನು ಬದಿಗೆ ಸರಿಸಿದ. ಗಿಡದ ಅಡಿಯಲ್ಲಿ ಪದ್ಮಾಸನ ಹಾಕಿಕೊಂಡು ಕುಳಿತು ಕಣ್ಣು ಮುಚ್ಚಿ ಈಶಧ್ಯಾನದಲ್ಲಿ ತತ್ಪರನಾದ

ನಾಲ್ಕು ಹಗಲು ರಾತ್ರಿಗಳು ಕಳೆದವು. ದೇವರಾಗಲಿ ಅವನ ದೂತರಾಗಲಿ ಹಾಯ್ದು, ಹಾಯುವ

ಲಕ್ಷಣ ಕಾಣಲಿಲ್ಲ. ನೀರಡಿಕೆಯಿಂದ ಹುಲ್ಲು ಕೊಯ್ಯುವವನ ಗಂಟಲು ಆರಿತು; ಹೊಟ್ಟೆಯಲ್ಲಿ ಹಸಿವು ಸಂಕಟ. ಈಗ ಅವನು ಚಿಂತಾಕ್ರಾಂತನಾದ.

ಬಹುಶಃ ಆ ಜನರ ಗುಂಪು ತನ್ನನ್ನು ಮೋಸಗೊಳಿಸಿರಬೇಕು ಎಂದುಕೊಂಡ. "ತನ್ನನ್ನು ಹಾಸ್ಯ ಮಾಡಿರಬಹುದೆ ? ಛೆ ! ಸಾಧ್ಯವಿಲ್ಲ ! ನನ್ನಂಥ ದರಿದ್ರನನ್ನು ಮೋಸಗೊಳಿಸಿದರೆ ಅವರಿಗೆ ಬಂದದ್ದೇನು ? ದೇವರಲ್ಲಿ ಶ್ರದ್ಧೆ ಇರಲಿ ಅಂದರು. ನಾನೂ ಹಾಂಗಾ ಮಾಡತಿದೀನಿ-" ಎಂದು ಕೊಂಡ.

ಮತ್ತೆ ಎಂಟು ದಿನ ಅವನು ಧ್ಯಾನಾಸಕ್ತನಾಗಿ ಕುಳಿತ. ಹದಿಮೂರನೆಯ ದಿನ ಮುಂಜಾವು ಒಂದು ಸಂಗತಿ ಸಂಭವಿಸಿತು.

ಗುಡ್ಡದ ತುದಿಗೆ ಸೂರ್ಯನು ಒಂದು ಮೋಡವನ್ನು ಬೆಳಗುತ್ತಿದ್ದ. ಆ ರಶ್ಮಿಗಳು ಪಶು ಪಕ್ಷಿಗಳಲ್ಲಿ ಚೈತನ್ಯ ತುಂಬುತ್ತಿದ್ದವು. ಹುಲ್ಲು ಕೊಯ್ಯುವವನ ಮೊಗದ ಮೇಲೆ ಆ ಕಿರಣಗಳು ಬಿದ್ದವು. ಒಂದು ಅಚ್ಚರಿಯ ಸಂಗತಿ ಸಂಭವಿಸಲು ಅವನು ಕಣ್ದೆರೆದ.

ಆ ಕಿರಣಗಳ ಗುಂಟ ಒಬ್ಬ ದೇವದೂತ ಇಳಿದು ಬಂದ. ಮುಖದ ಮೇಲೆ ಕರುಣೆಯ ಮಂದಹಾಸ ಮಿಂಚುತ್ತಿತ್ತು. ಮೊದ ಮೊದಲು ಆ ದೇವತೆ ದೂರ ದೂರ ಗೋಚರಿಸುತ್ತಿದ್ದು ಕ್ರಮೇಣ ಮಿಂಚಿನ ವೇಗದಿಂದ ಇಳಿದು ಹುಲ್ಲು ಕೊಯ್ಯುವವನ ಬಳಿಗೆ ಬಂದು ನುಡಿದ :-

"ತಮ್ಮಾ, ಇದನ್ನೇನು ಮಾಡಲಿಕ್ಕೆ ಹತ್ತೀದಿ ? ಹೀಂಗ ನೀ ದಿವಸಾ ಹಗಲು ಕಳೆದರ ಆಹಾರ ಹ್ಯಾಂಗ ಸಿಕ್ಕೀತು ? ಬದುಕತೀ ಹ್ಯಾಂಗ ? "

ಹುಲ್ಲು ಕೊಯ್ಯುವವನ ಕಣ್ಣಲ್ಲಿ ನೀರು ಬಂದು ನುಡಿದ- "ಬಹುಶಃ ನೀ ದೇವತಾ ಇರಬೇಕು. ನಾ ದೇವರ ಧ್ಯಾನದಾಗ ಇದ್ದೇನಿ. ವ್ಯರ್ಥಕಾಲ ಕಳೆದಿಲ್ಲ. ನಾ ಈ ನನ್ನ ಪ್ರೀತಿ ಬಿಡೋದಿಲ್ಲ."

"ನಿನಗೇನು ಬೇಕು ಹೇಳು. ನನ್ನ ದೇವರು ಕಳಿಸ್ಯಾನ. ನಿನ್ನ ಇಚ್ಛಾ ಪೂರ್ತಿ ಮಾಡಲಿಕ್ಕೆ ಬಂದೇನಿ."

ಹುಲ್ಲು ಕೊಯ್ಯುವವ,"-ಪ್ರಭು, ನನ್ನ ಬೇಡಿಕೆ ಸ್ವಲ್ಪ ಅದ. ತುಣುಕು ರೊಟ್ಟಿ ಹೂಜಿ ನೀರು ಇಷ್ಟು ನನಗೆ ಹಿಂದಕ ದುಡಿದಾಗ ಸಿಗುತ್ತಿದ್ದವು."

ದೇವದೂತ: "ಇಚ್ಛಾಪೂರ್ತಿ ಆಗತದ. ಪ್ರತಿ ದಿನ ಸೂರ್ಯ ಉದಯ ಕಾಲಕ್ಕ ಹೂಜಿ ನೀರು, ತುಣುಕು ರೊಟ್ಟಿ ಸಿಗತಾವ ನಿನಗ" ಇಷ್ಟು ನುಡಿದು ದೇವದೂತ ಹೊರಟುಹೋದ.

ಅದೇ ದೇಶದ ರಾಜನು ಬಹಳ ನ್ಯಾಯದಿಂದ ರಾಜ್ಯವಾಳುತ್ತಿದ್ದನು ಪ್ರಜಾನುರಾಗಕ್ಕೆ ಅತೀವ ಪಾತ್ರನಾಗಿದ್ದನು. ಆದರೇನು ? ಈಗ ಸುಮಾರು ಮೂವತ್ತು ವರ್ಷಗಳಿಂದ ಅರಮನೆಯ ಹೊರಗೆ ಅವ ಬಂದಿರಲಿಲ್ಲ. ಜನರ ಸ್ಥಿತಿಗತಿ ತಿಳಿಯಲು ಆಗಿರಲಿಲ್ಲ. ಹೊರಗಿನ ಪ್ರಪಂಚ ಸೊಗಸಾಗಿದೆ ಎಂಬ ಕಲ್ಪನೆ ಅವನಿಗೆ ಆಗಿದ್ದಿತು. ಪಶು-ಪಕ್ಷಿ, ಜನರು ಸುಖಲೋಲುಪರಾಗಿರುವರೆಂದು ತಿಳಿದಿದ್ದ. ತನ್ನ ಔದಾರ್ಯದ ಮೂಲಕರೋಗ, ರುಜಿನದಿಂದ ಜೀವಕೋಟಿ ವಿಮುಕ್ತವಾಗಿರುವದೆಂದು ತಿಳಿದಿದ್ದ. ಅರಸನು ಅಧಿಕಾರಿಗಳ ಮಾತಿನಲ್ಲಿ ವಿಶ್ವಾಸ ತಳೆದು ಜನತೆಯ ಕಲ್ಯಾಣಕ್ಕಾಗಿಯೇ ಹಗಲಿರುಳು ಯತ್ನಿಸುತ್ತಿದ್ದ ತಾನು ಜನರ ಹಿತಕ್ಕಾಗಿ ಕೈಕೊಂಡ ಯೋಜನೆಗಳು ಎಷ್ಟರ ಮಟ್ಟಿಗೆ ಫಲಕಾರಿಯಾಗಿವೆ ಎಂದು ನೋಡಲು ಒಂದು ದಿನ ಬೀದಿ ಬೀದಿಗೆ ಹೊರಟ. ಆದರೆ ಅಧಿಕಾರಿಗಳು ಹೇಳಿದ್ದು ನಿಜವಲ್ಲ ಎನಿಸಿತು. ದೇಶದ ಪರಿಸ್ಥಿತಿ ವಿಭಿನ್ನವಾಗಿದ್ದಿತು.

ಪೇಟೆ ದಾಟಿ ದಾರಿಯಲ್ಲಿ ಬರುವಾಗ ಒಂದು ಒಂಟೆ ಕಟ್ಟಿಗೆಯ ಮುಂಡಿಗೆಯಂತೆ ನಿಶ್ಚೇಷ್ಟಿತವಾಗಿ ಬಿದ್ದಿತ್ತು. ಅದಕ್ಕೆ ಏನಾಗಿದೆ ಎಂದು ದೊರೆ ಕೇಳಿದ.

ಆಗ ಅದರ ಒಡೆಯ ನುಡಿದ "ಇದು ಅದರ ಮರಣ ಸಮಯ. ಎಲ್ಲಾ ಪ್ರಾಣಿ ವರ್ಗದ ಅಂತಿಮ ಅವಸ್ಥಾ ಇಂತಹದಾ ಅದಾ"

ಅರಸನಿಗೆ ವ್ಯಥೆ ಎನಿಸಿತು. ಜೀವನದ ಅವಸಾನ ಇಷ್ಟೊಂದು ಮನವರಿಕೆಕಠಿಣವೆಂದು ಆಯಿತು.

ಇದನ್ನು ತಪ್ಪಿಸಿಕೊಳ್ಳಲಿಕ್ಕೆ ಏನು ಉಪಾಯ ?" ದೊರೆ ಕೇಳಿದ.

(26 ನೇ ಪುಟ ನೋಡಿ)

ಕಾವ್ಯವಾಹಿನೀ






ಶಿಲ್ಪಿವರ್ಯನ ಮನಸು
ಕಲ್ಪಿಸಿದ ಹೊಸ ಕನಸು
ಹಗಲಿರುಳ ಸವಿಯುಣಿಸು
ನೆಲೆ ಸೇರಿತು
ಕಲ್ಲರಳಿ ಪರಿಮಳಿಸಿತು !

ಪಾಷಾಣ ಪೂವಾಗಿ
ಪರುಷ ಮಾರ್ದವವಾಗಿ
ಶಿಲೆಯಿಂದ ಕಲೆಯಾಗಿ
ಬೆಲೆಯೇರಿತು.

ರಸಿಕಲೋಕಂ ಬಂದು
ಮುಗ್ಧಮೋಹದಿ ನಿಂದು
ಚೆಲುವೆ ಚೆಲ್ಲಿಹುದೆಂದು
ತಲೆದೂಗಿತು.

ಬಿಳಿಯಾನೆ ಇಂದ್ರಂಗೆ
ಸಿರಿತಾನುಪೇಂದ್ರಂಗೆ
ಸೊದೆ ಸೋನೆ ಸುರರಿಂಗೆ
ಹಸುಗೆಯಿಂತು.

ಮಂದರವ ಹೊತ್ತಿರುವ
ವಾಸುಕಿಯು ಸುತ್ತಿರುವ
ಸಾಹಸದಿ ಸತ್ತಿರುವ
ವಾರ್ತೆಯಿಲ್ಲ !

ಕೋಲಾಹಲದ ವಿಷದ
ಹಾಲಾಹಲವ ಕುಡಿದ
ಆಳುಗಳ ಬೀಳುಗಳ
ಬಾಳ್ತೆಯಿಲ್ಲ !

× × ×

ಬಲ್ಲವರು ಬಡವರು
ಎಲ್ಲವರು ನುಡಿದರು
ಕಲ್ಲೋಜನಿವನಾರು ?
ಪೇಳ್ದರಿಲ್ಲ !

ಹಾಲು ಮೊಸರಂ ಕುಡಿದು,
ಬೆಣ್ಣೆ ತುಪ್ಪವ ಸವಿದು
ಹಸುವಿಂಗೆ ಹಸಿವುಂಟೆ ?
ಕೇಳ್ದರಿಲ್ಲ !

× × ×

ಸಾವಿನಲಿ ಸವಿಯುಂಡನು !
ಅದೊ ಅಲ್ಲಿ ತಗ್ಗಿನಲಿ,
ನರಿಗಳೂಳಿಡುವಲ್ಲಿ,
ಭೀಮಕಾಯದ ತಾಳೆ
ಬೆಳೆದು ನಿಂತಲ್ಲಿ.

ಅಲ್ಲಿರುವ ಗುಡಿಸಲಲಿ,
ಹುಲ್ಲು ಚಾವಣಿಯಲ್ಲಿ
ಬಿಸಿಲು ಮಳೆ ಚಳಿಯೆಲ್ಲ–
ಹೊರ ಹೋಗದಲ್ಲಿ,

ಅವಗೆ ಆಸರೆಯಿತ್ತು !
ಬಂದಡಸಲಾಪತ್ತು,
ಹತ್ತು ಮಕ್ಕಳ ಹೆತ್ತು
ಮಡದಿ ಸಾಯೆ !

ಇದ್ದನವನೇಕಾಕಿ
ನಿದ್ದೆ ಹಸಿವಂ ನೂಕಿ
ಮುದ್ದು ಮಕ್ಕಳ ಸಾಕಿ
ದುಡಿದು ನೋಯೆ.

ಹಸಿವನ್ನೆ ತಿನ್ನುತ್ತ
ದಾಹವನೆ ಕುಡಿಯುತ್ತ
ಬಾಳುವೆಯ ಬೇಳುತ್ತ
ತಪದಿ ನಿಂತು.

ಕಠಿಣ ಶಿಲೆಯಂ ಕೆತ್ತಿ,
ಬಾಳಿನಾಸೆಯ ಬಿತ್ತಿ,
ಜೀವದೆಣ್ಣೆಯು ಬತ್ತಿ,
ಆರಿಹೋಯ್ತು

× × ×

ಅಲ್ಲಿ-ಆ ಗುಡಿಸಲಲಿ,
ನೆಲತಾಯ ಮಡಿಲಲ್ಲಿ,
ಮಲಗಿದವನಂ ಮರಳಿ
ನೆನೆಯಬೇಡ.

ಇಲ್ಲಿ–ಈ ಶಿಲೆಯಲ್ಲಿ,
ಕಲೆಯ ಹೂಯೆಸಳರಳಿ
ಪರಿಮಳಿಸುತಿದೆ ಹೊರಳಿ
ನಿಂತು ನೋಡ.

**—ಕಯ್ಯಾರ ಕಿಞ್ಞಣ್ಣ ರೈ.**
ಸಿದ್ಧಗಂಗಾ

ಜಾನಪದ ಜೇನು.

# ಗಿರಿಮ್ಯಾಲೆ ಕೋಡಿ ಹರಿಯೇತು

ತನ್ನ ಬಾಳಿನ ಸರ್ವಸ್ವವೆನಿಸಿದ ಗಂಡನನ್ನು ಕಳೆದುಕೊಂಡ ಹೆಣ್ಣು ತನ್ನ ಹಸುಗೂಸನ್ನು ಕಟ್ಟಿಕೊಂಡು ಒಡಹುಟ್ಟಿದ ಅಕ್ಕ, ಅಣ್ಣ, ತಮ್ಮ ಇವರನ್ನರಸಿ ಹೋಗಿ ಅವರ ವರ್ತನೆಯಿಂದ ಮನನೊಂದು ತನ್ನ ಬಾಳನ್ನೇ ಕಡೆಗಾಣಿಸಿದ ಕರುಣೆಯ ಕಥೆ ಹಂದಿದೆ ಇಲ್ಲಿ.

—ಎಚ್. ಎಸ್. ಸಿದ್ಧಗಂಗಪ್ಪ

ಸಮಾಜದಲ್ಲಿ ವ್ಯಕ್ತಿಗೆ ಗೌರವ, ಮನ್ನಣೆ ದೊರೆಯಬೇಕಾದರೆ, ದೊರಕಿಸಿಕೊಳ್ಳ ಬೇಕಾದರೆ ಅಧಿಕಾರಿಯಾಗಬೇಕು, ಇಲ್ಲವೆ ಶ್ರೀಮಂತನಾಗಬೇಕು. ಶ್ರೀಮಂತಿಕೆಯ ಮುಂದೆ ಉಳಿದೆಲ್ಲವೂ ಗೌಣ. ಹಣವೊಂದಿದ್ದರೆ ಅಸಾಧ್ಯವಾದುದೆಲ್ಲವನ್ನೂ ಸಾಧಿಸಬಹುದು. ಸಮಾಜದ ಈ ಧೋರಣೆಯನ್ನು ಕಂಡೇ ಜನಪದರು "ಕಾಸಿದ್ರೆ ಕೈಲಾಸ" ಎಂದಿರಬೇಕು. ಬಡವನನ್ನು ಕಂಡರೆ ಸಮಾಜ ಕಾಕ ದೃಷ್ಟಿಯಿಂದ ನೋಡುತ್ತದೆ. ಹುಲ್ಲು ಕೂಡ ಬುಸುಗುಟ್ಟುತ್ತದೆ. ಒಡ ಹುಟ್ಟಿದವರು, ಬಂಧುಗಳು ದೂರವಾಗುತ್ತಾರೆ. ಮಿತ್ರರು ಶತೃವಾಗುತ್ತಾರೆ.

ಜನಪದ ಸಾಹಿತ್ಯದಲ್ಲಿ ಬಡತನದ ಬವಣೆಯ ಚಿತ್ರವನ್ನು ಜನಪದ ಕವಿಗಳು ಹೃದಯ ಮುಟ್ಟುವಂತೆ, ಕಣ್ಣಿಗೆ ಕಟ್ಟುವಂತೆ ಸರಳವಾಗಿ ಸುಂದರವಾಗಿ ಅಭಿವ್ಯಕ್ತಗೊಳಿಸಿದ್ದಾರೆ. ಹೊಸದಾಗಿ ಮದುವೆಯಾದ ಹೆಣ್ಣು ಮಗಳೊಬ್ಬಳು ಗಂಡನ ಮನೆಗೆ ಜ್ಯೋತಿಯಾಗಿ ಬಂದಿದ್ದಾಳೆ. ಗಂಡ ತನ್ನ ಹೃದಯ ಶ್ರೀಮಂತಿಕೆಯಿಂದ ಕನಕಾಭಿಷೇಕ ಮಾಡಿದ್ದಾನೆ. ಅವರಿಬ್ಬರದು ಸಾಮರಸ್ಯ ದಾಂಪತ್ಯ ಜೀವನ. ಅದರ ಸಂಕೇತವಾಗಿ ಲೋಕಕ್ಕೆ ಹೊಸ ಜೀವದ ಕೊಡುಗೆ. ಕಷ್ಟ ಸುಖಗಳು ನಮ್ಮನ್ನು ಕೇಳಿ ಬರುವುದಿಲ್ಲ. ಹಠಾತ್ತನೆ ಅವಳ ಬಾಳಿನಲ್ಲಿ ಬಿರುಗಾಳಿ ಬೀಸುತ್ತದೆ. ಕಂದ ಇನ್ನೂ ಮೊಲೆಯುಣ್ಣುತ್ತಿರುವಾಗಲೇ ವಿಧಿ ಅವಳ ಮುತ್ತೈದೆತನವನ್ನು ಕಸಿದು ಕೊಂಡಿದೆ. ಮನೆಯ ನಂದಾ ದೀಪ ಆರಿ ಅವಳ ಮನೆ ಮತ್ತು ಮನದಲ್ಲಿ ಕತ್ತಲು ಆವರಿಸಿದೆ. ಆನಂದ ಬಾಷ್ಪದ ಜಾಗದಲ್ಲಿ ನೋವು ಆವರಿಸಿದೆ. ಬದುಕು ಶೂನ್ಯವಾಗಿದೆ.

ತನ್ನ ಕಂದನ ಭವಿಷ್ಯವನ್ನು ನೆನೆದಾಗ ಭಯ ಮೂಡುತ್ತದೆ. ಕರುಳು ಮಿಡಿಯುತ್ತದೆ. 'ಹಚ್ಚಡದ ಪದರಾದ ಅಚ್ಚ ಮಲ್ಲಿಗೆ ಹೂವ' ಬಗೆವಂಥ ಗಂಡನಿಲ್ಲದ ಬದುಕು ಅವಳದಾಗಿದೆ. 'ಕೂತು ಉಣ್ಣುವವರಿಗೆ ಕುಡಿಕೆ ಹಣವೂ ಸಾಲದು' ಎಂಬ ಗಾದೆಯಿದೆ. ದಿನ ಕಳೆದಂತೆ ಮನೆಯಲ್ಲಿದ್ದ ಅಲ್ಪ ಸ್ವಲ್ಪ ದವಸಧಾನ್ಯ ಬರಿದಾಗುತ್ತದೆ. ಮದುವೆಯ ಸಂದರ್ಭದಲ್ಲಿ ತಂದೆ ತಾಯಿಗಳು ಪ್ರೀತಿಯಿಂದ ಕೊಟ್ಟ ಒಡವೆಯನ್ನೂ ಅಡವಿಟ್ಟು ಮತ್ತೆ ಕೆಲವು ದಿನ ಜೀವನ ಸಾಗಿಸುತ್ತಾಳೆ. ಅವಳ ಪಾಲಿಗೆ ಮನ ಮತ್ತು ಮನೆ ಬರಿದಾಗುತ್ತದೆ. 'ಅಪ್ಪಾ' ಎಂದು ಒಂದು ಸಾರಿಯಾದರೂ ಕರೆಯುವ ಮುನ್ನ ತಬ್ಬಲಿಯಾದ ಕಂದನ ಕಂಡಾಗಲೆಲ್ಲಾ ದುಃಖ ಒತ್ತರಿಸಿ ಬರುತ್ತದೆ.

ಸಮಾಜ ಅವಳ ಪಾಡಿಗೆ ಬಾಳಲೂ ಬಿಡುವುದಿಲ್ಲ. ಅವಳಿಗೊದಗಿದ ದುಃಸ್ಥಿತಿಯನ್ನು ಕಂಡು ಮರುಗುವ ಬದಲು ವ್ಯಂಗ್ಯವಾಗಿ ನುಡಿಯುತ್ತ, ಕೆಟ್ಟ ಕಾಲಿನವಳು ಎಂದು ಆಡಿಕೊಳ್ಳುತ್ತಾರೆ. ದಿನಗಳೆದಂತೆ ಅವಳ ಆತ್ಮಾಭಿಮಾನ ಕುಂದುತ್ತದೆ. ನೈತಿಕ ಬಲವಿಲ್ಲದಂತಾದಾಗ ತೌರಿನ ನೆನಪು ಬರುತ್ತದೆ. ತಂದೆ ತಾಯಿಗಳಾದರೂ ಬದುಕಿದ್ದರೆ ಕಷ್ಟಕ್ಕೆ ನೆರವಾಗುತ್ತಿದ್ದರು. ರಕ್ತವನ್ನುಹಂಚಿಕೊಂಡು ಬಂದ ಅಣ್ಣ-ತಮ್ಮಂದಿರು, ಅಕ್ಕ-ತಂಗಿಯರು ತನಗೊದಗಿರುವ ಈ ಸ್ಥಿತಿಯನ್ನು ನೋಡಿ ಮರುಕಪಟ್ಟು ಸಹಾಯ ಮಾಡುತ್ತಾರೆ ಎಂಬ ಆತ್ಮವಿಶ್ವಾಸದಿಂದ, ತೌರಿನ ಮೇಲಿನ ಅಭಿಮಾನದಿಂದ, ಆಡಿಕೊಂಡವರ ಮೂಗು ಮುರಿಯುತ್ತಾಳೆ.

ನಾಗರ ಹೆಡಿಹಂಗ ನಾಲ್ವರು ಅಣತಮ್ಮ
ನಾ ಏನು ಬಲ್ಲೆ ಬಡತನ–ಅಣ್ಣಯ್ಯ
ಮಾಡೀಸಿ ಕೊಡುವನು ಒಡವೇಯ

ಅಷ್ಟೇ ಅಲ್ಲ

ಅರವತ್ತು ಅಂಕಣದ ಅರಮನೆಯಲ್ಲಿರುವವಳು
ಪುಣಿವಂತಗಾತಿ ಚಲುಗಾತಿ - ಅಕ್ಕನ್ನ
ಹಣೆಯಾಗ ಮೂಡಾಳ ಸಿರಿದೇವಿ.

ಬಂಗಾರದಂಥ ಗುಣವುಳ್ಳ ಅಣ್ಣ ತಮ್ಮಂದಿರು, ಅಕ್ಕ ಇರುವಾಗ ಬಡತನವೆಂದರೇನು ? ಒಡಹುಟ್ಟಿದವರನ್ನು ಕೊಂಡಾಡುತ್ತಾಳೆ. ತನಗೊದಗಿರುವ ಕಷ್ಟವನ್ನು ಮರೆತು ಶ್ರೀಮಂತಿಕೆಗೆ ಸಂತೋಷ ಪಡುತ್ತಾಳೆ.

ಎರಡು ದಿನದಿಂದಲೂ ಒಂದೊತ್ತಿಗೂ ಗಂಜಿ ಇಲ್ಲದಂತಾಗಿದೆ. ತನಗಿಲ್ಲದಿದ್ದರೂ ಚಿಂತೆಯಿಲ್ಲ, ಕಂದನಿಗೂ ತನ್ನೊಂದಿಗೆ ಉಪವಾಸ. ಕಂದನಿಗೆ ಕೊಡಲು ಒಂದು ಹಿಡಿ ಅನ್ನಕ್ಕಾಗಿ ಬೇಡಬಾರದವರನ್ನೆಲ್ಲ ಬೇಡಿ, ಅವರಿಂದ ಛೀಮಾರಿ ಹಾಕಿಸಿ ಕೊಂಡು, ಆತ್ಮಾಭಿಮಾನವನ್ನು ಕಳೆದು ಕೊಂಡು ಬಾಡಿದ ಮುಖದಿಂದ ಅಕ್ಕನ ಮನೆಗೆ ಬರುತ್ತಾಳೆ. ನಾಲ್ಕಾರು ದಿನ ಅಕ್ಕನ ಮನೆಯಲ್ಲಿ ನೆಮ್ಮದಿಯಾಗಿ ಬದುಕುವ ಆಸೆ ಹೊತ್ತು ಕಂದನನ್ನು ಎತ್ತಿಕೊಂಡು ಬರುತ್ತಾಳೆ. ಅಕ್ಕನ ಶ್ರೀಮಂತಿಕೆಯನ್ನು ಜನಪದ ಹೃದಯ ಸುಂದರವಾಗಿ ವರ್ಣಿಸಿದೆ.

ಅಕ್ಕನ ಮನಿಯಾಗ ಗಾಜೀನೆರಡು ಮಂಚ
ಬಂಗಾರದೆರಡು ತಲೆದಿಂಬು - ಇಟಗೊಂಡು
ಅಕ್ಕ ಬಾಣಂತಿ ಮಲಗ್ಯಾಳ

ಶ್ರೀಮಂತಿಕೆಯ ಸುಪ್ಪತ್ತಿಗೆ ಮೇಲಿರುವ ಅಕ್ಕನಿಗೆ ಬಡ ತಂಗಿ ಬಂದಾಗ ಕಂಡೂ ಕಾಣದಂತಿರುತ್ತಾಳೆ. ಶ್ರೀಮಂತಿಕೆಯ ಬಿಗುಮಾನದಿಂದ ನಾಲ್ಕಾರು ದಿನ ಇದ್ದು ಮನೆಗೆಲಸ ಮಾಡುವಂತೆ ಹೇಳುತ್ತಾಳೆ.

ಬಲ್ಲಿದಕ್ಕನ ಮನೆಗೆ ಬಡವಿ ತಂಗೆವ್ವ ಹೋದ್ರೆ
ಬರಿಗೊಡನ ಸಿಂಬೆ ಕೊಟ್ಟಳು -ತಂಗೀಗೆ
ಕರುವೀಗೆ ನೀರು ಕುಡಿಸೆಂದು

ಕನಸು ಮನಸಿನಲ್ಲಿಯೂ ನೆನೆಸಿರಲಿಲ್ಲ ಅಕ್ಕನಿಂದ ಇಂತಹ ಅಭೂತಪೂರ್ವ ಸ್ವಾಗತ ದೊರೆಯುತ್ತದೆಂದು. ತನಗಾದ ಅವಮಾನವನ್ನು ಮನಸ್ಸಿನಲ್ಲೇ ನುಂಗಿಕೊಂಡು, ಕಂದನ ಭವಿಷ್ಯದ ದೃಷ್ಟಿಯಿಂದ ಅಕ್ಕನ ಬಾಣಂತಿತನ ಮುಗಿಯುವವರೆಗೂ ಮನೆ ಆಳಿನಂತೆ ಮೂಗಿಗೆ ಕವಡೆ ಕಟ್ಟಿಕೊಂಡು ಹಗಲಿರುಳೆನ್ನದೆ ದುಡಿಯುತ್ತಾಳೆ. ದಿನೇ ದಿನೇ ಅಕ್ಕನ ಅಲಕ್ಷ್ಯತನ, ಅಸಭ್ಯ ವರ್ತನೆಯಿಂದ ಮನನೊಂದು ಅಕ್ಕನ ಮನೆಯನ್ನು ತೊರೆದು ತಮ್ಮನ ಮನೆಗೆ ಬರುತ್ತಾಳೆ. ಇಷ್ಟು ದಿನ ದುಡಿಸಿಕೊಂಡಿದ್ದಕ್ಕೆ ಅಕ್ಕ ಒಂದು ನೂಲೆಳೆಯನ್ನೂ ಕೊಡದೆ ಬರಿಗೈಯಲ್ಲಿ ಕಳುಹಿಸುತ್ತಾಳೆ. ಅಪರೂಪಕ್ಕೆ ಅನಿರೀಕ್ಷಿತವಾಗಿ ಬಂದ ಅಕ್ಕನನ್ನು ಕಂಡ ತಮ್ಮ

ಎಂದೂ ಬಾರದಕ್ಕ ತಾನಾಗಿ ಬಂದಾಳ
ಕುಂಡ್ರಾಕ ಕೊಡಿರೆ ಮಣೆಗಳ –ಅಕ್ಕನ್ಗೆ
ನೀಡೀರೆ ಸವಿಯಾದ ಹಗಲೂಟ

ಎಂದು ತನ್ನ ಮನದನ್ನೆಗೆ ಹೇಳುತ್ತಾನೆ. ತಂದೆ ತಾಯಿ ಸತ್ತ ನಂತರ ಒಂದು ಸಾರಿಯಾದರೂ ಅಕ್ಕನನ್ನ ತವರು ಮನೆಗೆ ಕರೆಸಿಕೊಂಡು, ತೌರುಬಣ್ಣವನ್ನು ಉಡಿಸಿ ಕಳುಹಿಸಿಲ್ಲ. ತನಗೊಬ್ಬ ಅಕ್ಕ ಇದ್ದಾಳೆ ಎಂಬುದನ್ನೇ ಮರೆತ ತಮ್ಮನಿಗೆ ಅವಳ ಆಗಮನ ಆಶ್ಚರ್ಯವಲ್ಲದೆ ಮತ್ತೇನು? ಮನೆ ಬಾಗಿಲಿಗೆ ಬಂದವಳನ್ನು ತಮ್ಮನೇನೋ ಸ್ವಾಗತಿಸಿದ. ನಾದಿನಿ –ತಮ್ಮನ ಹೆಂಡತಿ, ಮನೆಯ ಹೊಸ್ತಿಲನ್ನು ದಾಟಿ ಒಳಗೆ ಕಾಲಿಡುವ ಮುನ್ನವೇ ಮೂತಿ ತಿರುವುತ್ತ ಗಂಡನ ಮಾತಿಗೆ ಗುಡುಗಿನಂತೆ ಉತ್ತರ ಕೊಡುತ್ತಾಳೆ.

ಬೀಸಿದ ಹಿಟ್ಟಿಲ್ಲ ಕಾಸೀದ ತುಪ್ಪಿಲ್ಲ
ಏನಿಕ್ಕಲೀ ರಾಯ ಹಗಲೂಟ –ಬೆಳಗೀಗೆ
ಮಾಡಿ ಬಡಿಸೂವೆ ಬಿಸಿಯೂಟ

ಅವಳ ಆಗಮನ ನಾದಿನಿಗೆ ಹಾಲಿಗೆ ಹುಳಿ ಹಿಂಡಿದಂತಾಗುತ್ತದೆ. ಅವಳು ಹೆಣ್ಣಾದರೂ, ಹೆಣ್ಣಿನ ಹೃದಯವಿಲ್ಲದವಳು. ತಾಯಿಯಾಗಿದ್ದರೂ ತಾಯ್ತನವನ್ನರಿಯದವಳು. ಸಂಜೆ ಅಡಿಗೆ ಮಾಡಲು ಹಿಟ್ಟಿಲ್ಲ ಎಂದು ಹೇಳಿ ಜೋಳದ ರಾಶಿಯನ್ನೇ ಬೀಸಲು ಮುಂದಿಟ್ಟು

ಮಂಚದ ಮೇಲೆ ಮಲಗುತ್ತಾಳೆ. ಆಕೆಗಾಗಿ ತನ್ನ ತಾಯಿಯ ನೆನಪು ಬಂದು ದುಃಖ ಮರುಕಳಿಸುತ್ತದೆ. ತಾಯಿಯಿದ್ದರೆ ತನಗಿಂತಹ ಕಷ್ಟ ಬರುತ್ತಿತ್ತೇ ಎಂದು ಮರುಗುತ್ತಾಳೆ. ಒಪ್ಪೊತ್ತಿನೂಟಕ್ಕೂ ಗತಿಯಿಲ್ಲದ ಅವಳಿಗೆ ನಾದಿನಿಯನ್ನು ಎದುರಿಸುವಷ್ಟು ಧೈರ್ಯ ತಾನೆ ಎಲ್ಲಿಂದ ಬಂದೀತು. ಕಂದನನ್ನು ತೊಡೆಯ ಮೇಲೆ ಮಲಗಿಸಿಕೊಂಡು ಜೋಳವನ್ನು ಬೀಸಲು ಪ್ರಾರಂಭಿಸುತ್ತಾಳೆ. ಮನಸ್ಸಿನ ನೋವು ಕಣ್ಣೀರಾಗಿ ಹರಿದಿದೆ. ಬೀಸಿ, ಬೀಸಿ ಬಳಲಿದ್ದಾಳೆ. ಆಗಲೆ ಸಂಜೆಯಾಗಿ ಸೂರ್ಯ ಅವಳ ದುಃಖವನ್ನು ನೋಡಲಾರದೇ ಪಡುವಣ ದಿಕ್ಕಿನಲ್ಲಿ ಮರೆಯಾಗಿದ್ದಾನೆ. ಹೊಟ್ಟೆ ಹಸಿದು ತೊಳಸುವಂತಾಗಿದೆ. ರೆಟ್ಟೆಯಲ್ಲಿ ಬಲ ಕುಂದಿದೆ. ಅಡಿಗೆ ಮನೆಗೆ ಹೋಗಿ ಅಡಿಗೆ ಮಾಡಿ ಉಣ್ಣುವಷ್ಟು ಸ್ವಾತಂತ್ರ್ಯವಿಲ್ಲ. ಮಲಗಿದ ನಾದಿನಿಯನ್ನು ಎಬ್ಬಿಸುವುದಕ್ಕೂ ಧೈರ್ಯವಿಲ್ಲ. ಕೊನೆಗೆ ಸಹನೆಯ ಕಟ್ಟೆ ಒಡೆದು ಬಲ ಕುಂದಿದಾಗ ಅನಿವಾರ್ಯವಾಗಿ ತಮ್ಮನಿಗೆ

ಎಷ್ಟು ಬೀಸಿದರೂ ಮುಗಿಯದ ಈ ಜೋಳ
ಬೀಸುತ್ತಾ ಬೆರಳೆಲ್ಲ ನೊಂದಾವು –ತಮ್ಮಯ್ಯ
ಎಬ್ಬಿಸು ನಿನ್ನ ಮಡದೀಯ

ಎನ್ನುತ್ತಾಳೆ. ಅವಳ ಮಾತಿಗೆ ತಮ್ಮ ಚಾಟಿಯಂತೆ ಉತ್ತರ ಕೊಡುತ್ತಾನೆ. ಅವನು ಹೇಳುವ ಮಾತಾದರೂ ಏನು ?

ಮಡದೀಯ ಎಬ್ಬಿಸೋಕೆ ಬಸುರಿಯಾಗವ್ಳವಳು
ಮ್ಯಾಲೆ ದೊಡ್ಡವರ ಮಗಳಕ್ಕ –ಮಡದೀಯು
ನೀನೆ ಬೀಸಿ ಒಳಗೆ ತೆಗೆದೀಡು.

ತಮ್ಮ ಮದುವೆಯಾಗಿರುವುದು ಅವಳ ಶ್ರೀಮಂತಿಕೆಯನ್ನು. ಅವಳ ಶ್ರೀಮಂತಿಕೆಗೆ ತಮ್ಮ ಕೈಗೊಂಬೆಯಾಗಿರುವುದನ್ನು ಕಂಡು ಬೆರಗಾಗುತ್ತಾಳೆ. ಅಮ್ಮನ ಬಿರುನುಡಿಯನ್ನು ಕೇಳಿ ಕುಗ್ಗುತ್ತಾಳೆ. ಮಾತು ಮೌನವಾಗುತ್ತದೆ. ನಾದಿನಿ ಕೊಡುವ ತೊಂದರೆಯನ್ನು ನಿನ್ನ ಮುಖ ನೋಡಿ ಸಹಿಸಿದೆ, ತಾಳಿದೆ ಎಂದಾಗ, ತಮ್ಮ

ತಾಳು ತಾಳಲಿ ಬೇಡ ತಾಳಿ ಕೊಲ್ಲಲಿ ಬೇಡ
ನಾಳೆ ನನ್ನ ಮನೇಲಿರಬೇಡ -ಅಕ್ಕವ್ವ
ನಿನ್ನೂರಿಗೆ ನೀನು ನಡಿ ಬೇಗ

ಹುಣ್ಣಿನ ಮೇಲೆ ಬರೆ ಹಾಕಿದಂತಾಗುತ್ತದೆ ಅವನು ಕೊಡುವ ಉತ್ತರ. ಆಶ್ರಯ ನೀಡಬೇಕಾದ ಒಡಹುಟ್ಟಿದ ತಮ್ಮನೇ ಮನೆಬಿಟ್ಟು ಹೋಗು ಎಂದ ಮೇಲೆ ಅವಳಿಗಿನ್ನೆಲ್ಲಿ ನೆಲೆ ? ಭಾರವಾದ ಹೃದಯವನ್ನು ಹೊತ್ತು ತಮ್ಮನ ಮನೆಗೆ ಶರಣ್ಹೋಳಿ ಅಣ್ಣನ ಮನೆಗೆ ಬರುತ್ತಾಳೆ.

ತಂಗಿಯ ಆಗಮನವನ್ನು ಕಂಡು ಅಣ್ಣನಿಗೆ ಅಚ್ಚರಿಯಾಗುತ್ತದೆ. ಮನಸ್ಸಿನಲ್ಲಿ 'ಕರೆಯದೆ ಏಕೆ ಬಂದಳು ?" ಎಂದುಕೊಳ್ಳುತ್ತಾನೆ. ಆದರೆ ಅದನ್ನು ತೋರಗೊಡದೆ ಬಂದ ತಂಗಿಯನ್ನು ಒಳಗೆ ಕರೆದು ಕೂಡಿಸದೆ ನಡು ಮನೆಯಲ್ಲಿ ಕೂಡಿಸಿ ಮನೆಯೊಡತಿಗೆ ಹಾಲು ಅನ್ನ ನೀಡಲು ಹೇಳುತ್ತಾನೆ. ಮಾಸಿದ ಹರಕಲು ಸೀರೆಯನ್ನುಟ್ಟು ಗಂಡನನ್ನು ಕಳೆದು ಕೊಂಡು, ಬಡತನದ ಬವಣೆಯಲ್ಲಿ ಬೆಂದು ಆತ್ಮಾಭಿಮಾನವನ್ನು ಕಳೆದು ಕೊಂಡ ನಾದಿನಿಯನ್ನು ಅಣ್ಣನ ಹೆಂಡತಿ ಅಸಡ್ಡೆಯಿಂದ ಕಾಣುತ್ತಾಳೆ. ಚಿಕ್ಕವಳಾಗಿದ್ದಾಗ ಸಂತೋಷದಿಂದ ಒಳಗೂ, ಹೊರಗೂ ಸ್ವಚ್ಛಂದದಿಂದ ಓಡಾಡಿದ ಮನೆಯಿದು. ಆದರೆ ಇಂದು ಒಳಗೆ ಹೋಗಲು ಹಕ್ಕಿಲ್ಲ. ಅತ್ತಿಗೆ,ನಾದಿನಿ ಮತ್ತು ಅವಳ ಮಗನ ಆಗಮನವನ್ನು ತನ್ನ ಮನೆಗೆ ಬಂದ ಪೀಡೆ ಎಂದು ಭಾವಿಸುತ್ತಾಳೆ. ತಂಗಿಗೆ ಊಟಕ್ಕಿಡು ಎಂದು ಹೇಳಿದ ತನ್ನ ಗಂಡನಿಗೆ

ಆದ ಅನ್ನವ ನನ್ನ ಓನೂವ ಕಂದುಂಡ
ಕಾದ ಹಾಲೀಗೆ ಹೆಪ್ಪೆರೆದೆ –ರಾಯರೇ
ಆಗಲ್ಯಾದರೆನಗೆ ಹೇಳ್ಬಾರ್ದೆ

ಎನ್ನುತ್ತಾಳೆ. ಅತ್ತಿಗೆಯ ಈ ಕಾಕು ನುಡಿ ಅವಳ ಪಾಲಿಗೆ ಬರಸಿಡಿಲಾಗುತ್ತದೆ ತನಗೆ ಊಟವಿಲ್ಲದೆ ಇದ್ದರೂ ಸಹಿಸಿಕೊಂಡು ಇದ್ದಾಳು. ಆದರೆ ಎರಡು ದಿನದಿಂದಲೂ ತನ್ನ ಕಂದನಿಗೆ ಉಪವಾಸ. ಒಂದು ಹಿಡಿ ಅನ್ನವನ್ನು ಕೊಡದಿದ್ದರೂ ಒಂದು ಲೋಟ ನೀರು ಬೆರೆಸಿದ ಹಾಲನ್ನಾದರೂ ಕೊಟ್ಟಿದ್ದರೆ ಸಾಕಾಗಿತ್ತು. ಅದರಿಂದ ಅವಳಿಗೆ ಕ್ಷಣಕಾಲವಾದರೂ ನೆಮ್ಮದಿ ದೊರಕುತ್ತಿತ್ತು - ಬಿಸಿಲಿನಿಂದ ಬಂದ ಅವಳಿಗೆ ಒಂದು ಲೋಟ ನೀರು, ಒಂದು ಒಳ್ಳೆಯ ಮಾತು ಅವಳ ಪಾಲಿಗೆ ಇಲ್ಲವಾಗಿತ್ತು.

ಮನೆಗೆ ಬಂದು ಇನ್ನೂ ಒಂದು ಅರೆಘಳಿಗೆ ಕೂಡ ಕಳೆದಿಲ್ಲ. ಆಗಲೇ ಅತ್ತಿಗೆ ಒಂದು ಪುಟ್ಟಿಗೆ ತುಂಬ ನವಣೆಯನ್ನು ಕುಟ್ಟಲು ಮುಂದಿಟ್ಟಿದ್ದಾಳೆ.

(26 ನೇ ಪುಟ ನೋಡಿ)

# ವರ್ಣರಂಜಿತ ವಜ್ರಮಹೋತ್ಸವ

—ಎಚ್. ಎಸ್. ಸಿದ್ಧಗಂಗಪ್ಪ.

ಕಳೆದ ಏಪ್ರಿಲ್‌ನಲ್ಲಿ ಕನ್ನಡ ಸಾಹಿತ್ಯ ಪರಿಷತ್ತು ತನ್ನ 60ನೇ ಹುಟ್ಟು ಹಬ್ಬವನ್ನು ಒಂದು ವಾರ ಕಾಲ ಅತ್ಯಂತ ವಿಜೃಂಭಣೆಯಿಂದ ರಾಷ್ಟ್ರ ಮಟ್ಟದಲ್ಲಿ ಆಚರಿಸಿ ಅಭೂತ ಪೂರ್ವ ಕಾರ್ಯಕ್ರಮಗಳನ್ನು ಏರ್ಪಡಿಸಿದ್ದಿತು. ಸಮಾರಂಭದ ಒಂದು ಸಮೀಕ್ಷೆ ಇಲ್ಲಿದೆ

ಕನ್ನಡ ಸಾಹಿತ್ಯ ಪರಿಷತ್ತು ತನ್ನ 60 ನೇ ಹುಟ್ಟು ಹಬ್ಬವನ್ನು ರಾಷ್ಟ್ರಮಟ್ಟದಲ್ಲಿ ವೈಭವದಿಂದ ಒಂದು ವಾರ ಕಾಲ ಆಚರಿಸಿದುದು ನಿಜಕ್ಕೂ ಹೆಮ್ಮೆಪಡುವಂತಹದು. ಇದರಿಂದ ಕನ್ನಡದ ಬಾವುಟ ರಾಷ್ಟ್ರಮಟ್ಟದಲ್ಲಿ ಹಾರಾಡುವಂತಾದುದು ಕನ್ನಡ ಕುಲಕೋಟಿಯ ಅಭಿಮಾನದ ಪ್ರತೀಕ. ಪರಿಷತ್ತಿನ ಅರವತ್ತು ವರ್ಷದ ಸುದೀರ್ಘ ಇತಿಹಾಸದಲ್ಲಿ ಅದೆಷ್ಟು ಜನ ಶ್ರಮಿಸಿದ್ದರೋ ಅದೆಷ್ಟು ಜನರು ಪ್ರತ್ಯಕ್ಷವಾಗಿ, ಪರೋಕ್ಷವಾಗಿ ತುಂಬು ಹೃದಯದಿಂದ ನೆರವನ್ನು ನೀಡಿದ್ದಾರೋ, ಅವರೆಲ್ಲರ ಅಭಿಮಾನದಿಂದ ಪರಿಷತ್ತು ತನ್ನ ಅರವತ್ತು ವರ್ಷವನ್ನು ದಾಟಿದೆ.

ಏಪ್ರಿಲ್ 23 ರಿಂದ 28 ರವರೆಗೆ ನಗರದ ಕೋಟೆ ಹೈಸ್ಕೂಲಿನ ಆವರಣದಲ್ಲಿ ವಿಜೃಂಭಣೆಯಿಂದ ವಜ್ರಮಹೋತ್ಸವದ ಕಾರ್ಯಕ್ರಮ ನಡೆಯಿತು. ಪರಿಷತ್ತಿನ ಹಿತೈಷಿಗಳಾಗಿದ್ದು ಅದರ ಅಸ್ತಿತ್ವಕ್ಕೆ ಕಾರಣರೆನಿಸಿದ್ದ ಆಚಾರ್ಯಶಿಲ್ಪಿ ದಿವಂಗತ ಮೋಕ್ಷಗುಂಡಂ ವಿಶ್ವೇಶ್ವರಯ್ಯ ಅವರ ನಾಮಾಂಕಿತದ ಪ್ರವೇಶದ್ವಾರ, ಪರಿಷತ್ತಿನ ಅಭ್ಯುದಯಕ್ಕಾಗಿ ಪ್ರತ್ಯಕ್ಷವಾಗಿ ಪರೋಕ್ಷವಾಗಿ ನೆರವನ್ನು ನೀಡಿದ ದಿವಂಗತ ಶ್ರೀ ಜಯಚಾಮರಾಜ ಒಡೆಯರ್‌ರವರ ಪ್ರವೇಶದ್ವಾರ. ಸಭಾಮಂಟಪಕ್ಕೆ ಶೋಭೆಯನ್ನು ತಂದಿತ್ತು.

ವಜ್ರಮಹೋತ್ಸವದ ಕಾರ್ಯಕ್ರಮಗಳು. ದಿನಾಂಕ 23 ರಂದು ಸಂಜೆ ಕೃಷ್ಣರಾಜಮಂಟಪದಲ್ಲಿ ವಿವಿಧಕಲಾ ಪ್ರದರ್ಶನಗಳ ಉದ್ಘಾಟನೆಯೊಂದಿಗೆಪ್ರಾರಂಭವಾಯಿತು. ಉದ್ಘಾಟನಾ ಸಮಾರಂಭದ ಅಧ್ಯಕ್ಷತೆ ವಹಿಸಿದ್ದ ಕೇಂದ್ರದ ಮಾಜಿ ಶಿಕ್ಷಣ ಸಚಿವ ಶ್ರೀ ವಿ. ಕೆ. ಆರ್. ವಿ. ರಾವ್. ಅವರು ಪ್ರದರ್ಶನಗಳ ಬಗ್ಗೆ ಮೆಚ್ಚಿಗೆ ವ್ಯಕ್ತಪಡಿಸಿ ಈ ಎಲ್ಲಾ ಪ್ರದರ್ಶನಗಳು ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ಖಾಯಂ ವ್ಯವಸ್ಥೆಯಾಗುವಂತೆ ಮಾಡಬೇಕೆಂದು ಸಲಹೆ ಮಾಡಿದರು.

ಪುಸ್ತಕ ಪ್ರದರ್ಶನವನ್ನು ಮೈಸೂರು ವಿಶ್ವವಿದ್ಯಾನಿಲಯದ ಉಪಕುಲಪತಿಗಳಾದ ಶ್ರೀ ಡಿ.ವಿ.ಅರಸ್ ಅವರೂ, ಬೆಂಗಳೂರು ವಿಶ್ವವಿದ್ಯಾನಿಲಯದ ಉಪಕುಲಪತಿಗಳಾದ ಡಾ|| ಎಚ್. ನರಸಿಂಹಯ್ಯ ಅವರು ಪತ್ರಿಕಾ ಪ್ರದರ್ಶನವನ್ನೂ, ಉದ್ಘಾಟಿಸಿ ಶುಭಕೋರಿ ಕನ್ನಡ ಪರಿಷತ್ತಿನ ಸಾಧನೆಯನ್ನು ಶ್ಲಾಘಿಸಿದರು.

ಮಹೋತ್ಸವದ ಎರಡನೇ ದಿನ ಬೆಳಿಗ್ಗೆ 10 ಗಂಟೆಗೆ ವಜ್ರಮಹೋತ್ಸವ ಕಟ್ಟಡದ ಶಂಕುಸ್ಥಾಪನೆಯನ್ನು ಕಂದಾಯ ಮಂತ್ರಿಗಳಾದ ಶ್ರೀ ಹುಚ್ಚಮಾಸ್ತಿಗೌಡ ಅವರು ನೆರವೇರಿಸಿದರು. ಮಹೋತ್ಸವದ ಉದ್ಘಾಟನೆಯನ್ನು ಕರ್ನಾಟಕ ರಾಜ್ಯದ ರಾಜ್ಯಪಾಲರಾದ ಶ್ರೀ ಉಮಾಶಂಕರ ದೀಕ್ಷಿತ್ ಅವರು ಮಾಡಿದರು. ಅವರು "ಸಮನ್ವಯ ದೃಷ್ಟಿಯಿಂದ ದೇಶ ವಿಶಾಲವಾಗಲು

ಕನ್ನಡಿಗರೇ ಮಾರ್ಗದರ್ಶನ ಮಾಡಬೇಕೆಂದರಲ್ಲದೆ ಇಂಗ್ಲೀಷ್ ಭಾಷೆ ವಿಶ್ವದಲ್ಲೇ ಅತ್ಯಂತ ವ್ಯಾಪಕವಾಗಿ ರುವುದಕ್ಕೆ ಅದರ ಸಾರ ಸಂಗ್ರಹ ಬುದ್ಧಿ ಕಾರಣವೆಂದೂ ಕನ್ನಡಕ್ಕೆ ಜಾತ್ಯಾತೀತ ಭಾಷಾವೇದಿಕೆಯಲ್ಲಿ ಅಗ್ರಸ್ಥಾನ ದೊರಕಬೇಕಾದರೆ ಅದು ವಿಶ್ವದ ಎಲ್ಲ ಭಾಷೆಗಳ ಸಾರ ವನ್ನು ಪಡೆಯಬೇಕು " ಎಂದರು.

ಮುಖ್ಯಮಂತ್ರಿಗಳ ಗೈರು ಹಾಜರಿಯಲ್ಲಿ ಸಮಾರಂಭದ ಅಧ್ಯಕ್ಷತೆ ವಹಿಸಿದ್ದ ಕಂದಾಯ ಮಂತ್ರಿ ಟಿ. ಎನ್. ಹುಚ್ಚಮಾಸ್ತಿಗೌಡರು ‹ ವಿಶಾಲ ರಾಷ್ಟ್ರ ವಾದ ಭಾರತದ ಸಮಗ್ರತೆ ಮತ್ತು ಭಾವೈಕ್ಯತೆಯ ದೃಷ್ಟಿ ಯಿಂದ ದೇವನಾಗರಿಯನ್ನು ಏಕಲಿಪಿಯನ್ನಾಗಿ ಅಂಗೀಕ ರಿಸುವುದು ಸೂಕ್ತವೆಂದರು ಅವರು ಕನ್ನಡ–ಕನ್ನಡ ನಿಘಂಟುವಿನ ಮೂರನೇ ಸಂಪುಟವನ್ನು ಸಂಕ್ಷಿಪ್ತ ಕನ್ನಡ-ಕನ್ನಡ ನಿಘಂಟುವಿನ ಒಂದು ಲಕ್ಷ ಪ್ರತಿಗಳನ್ನು ವಿದ್ಯಾರ್ಥಿಗಳಿಗಾಗಿ ಮಾಡಿದ ಕನ್ನಡರತ್ನ ಕೋಶದ ಎರಡು ಲಕ್ಷ ಪ್ರತಿಗಳನ್ನು ಬಿಡುಗಡೆ ಮಾಡಿದರು ವಜ್ರ ಮಹೋತ್ಸವದ ನೆನಪಿನ ಸಂಚಿಕೆ ‹ ಕೌಸ್ತುಭ ’ದ ಕನ್ನಡ ಮತ್ತು ಇಂಗ್ಲೀಷ್ ಆವೃತ್ತಿಗಳೆರಡನ್ನ ಸಚಿವರಾದ ಟಿ. ಆರ್. ಗುಂಡೂರಾವ್ ಅವರ ಬಿಡುಗಡೆ ಮಾಡಿದರು.

ಕನ್ನಡ ಸಾಹಿತ್ಯ ಪರಿಷತ್ತು ತನ್ನ ಪಂಚ ವಾರ್ಷಿಕ ಯೋಜನೆಯ ಅಂಗವಾಗಿ ಹೊರತಂದಿರುವ ‹ ಕರ್ನಾಟಕ ಜನಪದ ಕಲೆಗಳು , ಎಂಬ ವಿಶಿಷ್ಟಕೃತಿ ಯನ್ನೂ ಒಳಗೊಂಡಂತೆ 46ಪ್ರಕಟಣೆಗಳು, ಖಾಸಗಿ ಪ್ರಕಾಶಕರಿಂದ ಕೆಲವು ಪ್ರಕಟಣೆಗಳನ್ನೂ ಏಕ ಕಾಲದಲ್ಲಿ ಅರ್ಥಮಂತ್ರಿ ಶ್ರೀ ಎಂ.ವೈ. ಘೋರ್ಪಡೆ ಅವರು ಬಿಡುಗಡೆ ಮಾಡುತ್ತಾ ‹ಕನ್ನಡದ ಕೆಲಸಕ್ಕೆ ಎಂದೂ ಹಣದ ಅಭಾವ ವಿರಬಾರದು. ಈಗಲೂ ಇಲ್ಲ ಮುಂದೂ ಇರದು, ಎಂದರು.

ಮಧ್ಯಾಹ್ನ ನಡೆಯ ಬೇಕಾಗಿದ್ದ ಹಿರಿಯ ರಿಂದ ಶುಭಾರೈಕೆ ಮತ್ತು ಸಾಹಿತ್ಯ, ಕಲೆ ಮುಂತಾದ ಕ್ಷೇತ್ರಗಳಲ್ಲಿ ಹಿರಿಯ ಸಾಧನೆ ಮಾಡಿದವರಿಗೆ ಸನ್ಮಾನ ಸಮಾರಂಭವನ್ನು ವರುಣದೇವನ ಅಡ್ಡಿಯಿಂದ ಮುಂದೆ ಹಾಕಲಾಯಿತು.

ದಿನಾಂಕ 25ರಂದು ಬೆಳಿಗ್ಗೆ 9 ಗಂಟೆಗೆ ಅಂತರ ಭಾರತಿ ಸಾಹಿತ್ಯಗೋಷ್ಠಿ ನಡೆಯಿತು. ಡಾ. ಮಾಸ್ತೀ ವೆಂಕಟೇಶ ಅಯ್ಯಂಗಾರ್ ಅವರು ಗೋಷ್ಠಿ ಯನ್ನು ಉದ್ಘಾಟಿಸುತ್ತಾ, ಭಾರತೀಯ ಸಾಹಿತ್ಯ ಭಾಷೆ ಬೇರೆ ಇದ್ದರೂ ಬರಹದ ಮೂಲದ್ರವ್ಯ ಒಂದೆ ಎಂದು ನುಡಿದರು

ಭಾರತೀಯ ಸಾಹಿತ್ಯದಲ್ಲಿ ಭಾರತೀಯತೆ ಮತ್ತು ಮಹಾಸಾಹಿತ್ಯ ಜ್ಞಾನ ಪೀಠ ಪ್ರಶಸ್ತಿ ವಿಜೇತ ರಾಗಿರುವ ಮತ್ತು ಪ್ರಶಸ್ತಿ ನಿರ್ಧಾರ ಸಮಿತಿಯ ಅಧ್ಯಕ್ಷ ರಾಗಿರುವ ಡಾ. ಉಮಾಶಂಕರ ಜೋಷಿಯವರ ಅಧ್ಯಕ್ಷತೆ ಯಲ್ಲಿ ಪಾಲ್ಗೊಂಡವರು ಶ್ರೀಯುತರಾದ ಡಾ. ಸಿ. ಎನ್ ಶಾಸ್ತ್ರಿ ( ಅಮರೇಂದ್ರ-ತೆಲಗು ) ಎಂ. ಪಿ. ರೇಗೆ ಮರಾಠಿ ) ದೀನಾನಾಥ್ ನಾಡಿಂ ( ಕಾಶ್ಮೀರಿ ) ಕುಲ ವಂತ್ ಸಿಂಗ್ ವಿರ್ಕ್ ( ಪಂಜಾಬಿ ) ವಿಜಯ್‌ದಾಸ್ ದೇಥಾ (ರಾಜಸ್ಥಾನಿ ) ಫಣೀಶ್ವರನಾಥ ರೇಣು (ಹಿಂದಿ) ಬೀರೇಂದ್ರ ಕುಮಾರ್ ಭಟ್ಟಾಚಾರ್ಯ (ಅಸ್ಸಾಮಿ ) ಎ. ಎನ್. ಮೂರ್ತಿರಾವ್ ( ಕನ್ನಡ ) ಇವರುಗಳು ಭಾರತಿಯ ಸಾಹಿತ್ಯದಲ್ಲಿ ಭಾರತೀಯತೆ ಎಂಬ ವಿಚಾರ ವಾಗಿ ಮಾತನಾಡಿದರು.

ಹಿಂದಿನ ದಿನವೇ ನಡೆಯ ಬೇಕಾಗಿದ್ದ ಶುಭ ಹಾರೈಕೆ ಕಾರ್ಯಕ್ರಮ ನಡೆಯಿತು. ಪರಿಷತ್ತಿನ ಕನ್ನಡ ಸಾಹಿತ್ಯ ಸಮ್ಮೇಳನಗಳ ಅಧ್ಯಕ್ಷರುಗಳಾದ ಡಾ. ಮಾಸ್ತಿ ವೆಂಕಟೇಶ ಅಯ್ಯಂಗಾರ್, ಡಾ. ರಂ. ರಾ. ದಿವಾಕರ್, ವ್ಯಾಕರಣ ತೀರ್ಥ ಶ್ರೀ ಚಂದ್ರಶೇಖರಶಾಸ್ತ್ರಿ, ಡಾ. ದ. ರಾ. ಬೇಂದ್ರೆ, ಡಾ. ವಿ. ಸೀತರಾಮಯ್ಯ, ಡಾ. ಆದ್ಯ ರಂಗಾಚಾರ್ಯ, ಡಾ. ವಿ ಕೆ. ಗೋಕಾಕ್, ಡಾ ರಂ. ಶ್ರೀ ಮುಗಳಿ, ದೇ. ಜವರೇಗೌಡ, ಡಾ. ಜಯದೇವಿ ತಾಯಿ ಲಿಗಾಡೆ, ಡಾ. ಎಸ್. ವಿ. ರಂಗಣ್ಣ ಅವರುಗಳು ಮಾತ ನಾಡಿ ಪರಿಷತ್ತಿಗೆ ಶುಭ ಹಾರೈಸಿದರು.

ನಂತರ ಡಾ. ಎಸ್. ವಿ. ರಂಗಣ್ಣ ಅವರ ಅಧ್ಯ ಕ್ಷತೆಯಲ್ಲಿ ವಿವಿಧ ಕ್ಷೇತ್ರಗಳಲ್ಲಿ ಅಪಾರವಾಗಿ ಸೇವೆ ಸಲ್ಲಿ ಸಿದ 29 ಜನ ಗಣ್ಯರನ್ನು ಸನ್ಮಾನಿಸಲಾಯಿತು.

ವಜ್ರಮಹೋತ್ಸವ ಕಾರ್ಯಕ್ರಮಗಳಲ್ಲಿ ನಡೆದ ಮುಖ್ಯವಾದ ಕಾರ್ಯಕ್ರಮವೆಂದರೆ ಕೇಂದ್ರ ಸಾಹಿತ್ಯ ಅಕಾಡಮಿ ಪ್ರಶಸ್ತಿ ಪ್ರಧಾನ ಸಮಾರಂಭ ಭಾರತೀಯ ಸಾಹಿತ್ಯ ಅಕಾಡಮಿ ತನ್ನ ಎರಡು ದಶಕ

ಗಳಿಗೂ ಹೆಚ್ಚು ಕಾಲದ ಸಂಪ್ರದಾಯವನ್ನು ತೋರಿದು ಮೊದಲ ಬಾರಿಗೆ ನಡೆದ ಈ ಸಮಾರಂಭ, ಕೇಂದ್ರ ಸಾಹಿತ್ಯ ಅಕಾಡಮಿ ಉಪಾಧ್ಯಕ್ಷರಾದ ಡಾ. ಕೆ. ಆರ್. ಶ್ರೀನಿವಾಸ ಅಯ್ಯಂಗಾರ್ ಇವರ ಅಧ್ಯಕ್ಷತೆಯಲ್ಲಿ ನಡೆಯಿತು.

ಕನ್ನಡದಲ್ಲಿ 'ಮನಮಂಥನ' ಕೃತಿಯನ್ನು ನೀಡಿದ ಪ್ರಸಿದ್ಧ ನಗೆ ಬರಹಗಾರ ಡಾ. ಎಂ. ಶಿವರಾಂ, ಶ್ರೀಮತಿ ಮೈತ್ರೇಯಿ ದೇವಿ (ಬಂಗಾಳಿ) ಡಾ. ಎಸ್. ಗೋಪಾಲ್ (ಇಂಗ್ಲೀಷ್) ಎನ್. ಪಾಂಡ್ಯ (ಗುಜರಾತಿ) ದಿವಂಗತ ಯಶಪಾಲ್ (ಹಿಂದಿ) (ಲೇಖಕರ ಪರವಾಗಿ ಅವರ ಪತಿ ಶ್ರೀಮತಿ ಪ್ರಕಾಶವತಿಪಾಲ್,) ಶ್ರೀ ಪುಷ್ಕರ್ ಭಾನ್ (ಕಾಶ್ಮೀರಿ) ಶ್ರೀ ವೈದ್ಯನಾಥ್ ಮಲ್ಲಿಕ್ (ಮೈಥಿಲಿ) ದಿವಂಗತ ಪಿ. ಗೋವಿಂದ ಪಿಶರೋಟಿ (ಮಲೆಯಾಳಂ) (ಅವರ ಪರವಾಗಿಪತ್ನಿ ಶ್ರೀಮತಿ ಲಕ್ಷ್ಮಿವಿಶರಾಣಿಯಾರ್ ಶ್ರೀ ಎಲ್. ಸಮರೇಂದ್ರ ಸಿಂಗ್ (ಮಣಿಪುರಿ) ಶ್ರೀ ಜಿ. ಎನ್. ದಾಂಡೇಕರ್ (ಮರಾಠಿ) ಕರ್ನಲ್ ನರೇಂದ್ರ ಪಾಲ್‌ಸಿಂಗ್ (ಪಂಜಾಬಿ) ಶ್ರೀ ಲಕ್ಷ್ಮಣ ಭಟೀಯ (ಕೋಮಲ್) (ಸಿಂಧಿ) ಮತ್ತು ದಿವಂಗತ ಜಾನ್ ನಿಸಾರ್ ಅಖ್ತಾರ್ (ಉರ್ದು- ಅವರ ಪರವಾಗಿ ಪತ್ನಿ ಖದಿಜಿಯ ಜಾನ್ ನಿಸಾರ್ ಅಖ್ತಾರ್) ಅವರುಗಳು ಪ್ರಶಸ್ತಿಗಳನ್ನು ಸ್ವೀಕರಿಸಿದರು. ಅವರೆಲ್ಲರೂ ಮಾತನಾಡಿ ಕನ್ನಡ ಸಾಹಿತ್ಯ ಪರಿಷತ್ತಿನ ಸೇವೆಯನ್ನು ಪ್ರಶಂಸಿಸಿದರಲ್ಲದೆ ವಜ್ರಮಹೋತ್ಸವದ ಕಾರ್ಯಕ್ರಮದ ವ್ಯವಸ್ಥೆಯ ಬಗ್ಗೆ ಬಹುವಾಗಿ ಮೆಚ್ಚಿಕೊಂಡರು.

ಪ್ರಶಸ್ತಿ ವಿತರಣೆ ಮಾಡಿದ ಅಕಾಡಮಿ ಉಪಾಧ್ಯಕ್ಷ ಡಾ. ಕೆ. ಆರ್. ಶ್ರೀನಿವಾಸಅಯ್ಯಂಗಾರ್ ಇತ್ತೀಚಿನ ನಿರಾಶೆಯ ದಿನಗಳು ಕಳೆದು ಭವಿಷ್ಯದ ಬಗ್ಗೆ ಆಸೆಯ ಬೆಳಕು ಹೊತ್ತಿಕೊಂಡಿರುವಾಗ ಈ ಪ್ರಶಸ್ತಿ ವಿತರಣೆ ಬೆಂಗಳೂರಿನಲ್ಲಿ ನಡೆಯುತ್ತಿರುವುದು ಸಂತಸವನ್ನುಂಟು ಮಾಡಿದೆ ಎಂದರು.

ದಿನಾಂಕ 26 ರಂದು ನಡೆದ ಕನ್ನಡ ಸಾಹಿತ್ಯ ಗೋಷ್ಠಿಯಲ್ಲಿ "ಕನ್ನಡದ ಸರ್ವಾಂಗೀಣ ಪ್ರಗತಿಯ ಮುಂದಿನ ಹೆಜ್ಜೆಗಳು" ಎಂಬ ಚಾರವಾಗಿ ವಿವಿಧ ಕ್ಷೇತ್ರಗಳಲ್ಲಿ ಸೇವೆ ಸಲ್ಲಿಸಿದ ಗಣ್ಯರಿಂದ ವಿಚಾರ ಸಂಕಿರಣ ನಡೆಯಿತು. ಕರ್ನಾಟಕ ವಿಶ್ವವಿದ್ಯಾನಿಲಯದ ಉಪಕುಲಪತಿಗಳಾದ ಡಾ|| ಆರ್. ಸಿ. ಹಿರೇಮಠ ಅವರು ಗೋಷ್ಠಿಯನ್ನು ಉದ್ಘಾಟಿಸಿ ಈ ಗೋಷ್ಠಿ ಕನ್ನಡ ಕ್ಷೇತ್ರಕ್ಕೆ ಉತ್ತಮ ಕೊಡುಗೆಯಾಗುವುದರಲ್ಲಿ ಸಂಶಯವಿಲ್ಲ ಎಂದು ಹೇಳಿದರು. ಗೋಷ್ಠಿಯ ಅಧ್ಯಕ್ಷತೆಯನ್ನು ಮೈಸೂರು ವಿಶ್ವವಿದ್ಯಾನಿಲಯದ ಮಾಜಿ ಉಪಕುಲಪತಿಗಳಾದ ಡಿ. ಜವರೇಗೌಡರವರು ವಹಿಸಿದ್ದರು. ಪರಿಷತ್ತಿನ ಮಾಜಿ ಕಾರ್ಯದರ್ಶಿ ಶ್ರೀ ಹಂ.ಪ.ನಾಗರಾಜಯ್ಯ ಗೋಷ್ಠಿಯನ್ನು ನಿರ್ದೇಸಿಶಿದರು.

ಗೋಷ್ಠಿಯಲ್ಲಿ ಶ್ರೀಯುತರಾದ ಜಯತೀರ್ಥರಾಜಪುರೋಹಿತ್ (ಎಲ್ಲ ಕ್ಷೇತ್ರಗಳಲ್ಲೂ ಕನ್ನಡ ಬಳಕೆ) ಎಸ್. ಮಂಚಯ್ಯ (ಶಿಕ್ಷಣದಲ್ಲಿ ಮತ್ತು ಉದ್ಯೋಗಗಳಲ್ಲಿ ಕನ್ನಡದ ಸ್ಥಾನ) ನ. ಭದ್ರಯ್ಯ (ಕನ್ನಡ ಮತ್ತು ಸಾಕ್ಷರತೆ) ಪ್ರಧಾನ ಗುರುದತ್ತ (ಕನ್ನಡ ಮತ್ತು ಭಾಷಾಂತರ) ಡಾ. ಎಚ್. ತಿಪ್ಪೇರುದ್ರಸ್ವಾಮಿ (ಕನ್ನಡ ಮತ್ತು ವಿಚಾರ ಸಾಹಿತ್ಯ) ಡಾ|| ಶಂಕರ ಮೊಕಾಶಿ ಪುಣೇಕರ ಮತ್ತು ಡಾ|| ಎಸ್. ಎಂ. ವೃಷಭೇಂದ್ರಸ್ವಾಮಿ (ಕನ್ನಡ ಮತ್ತು ಸೃಜನಶೀಲ ಹಾಗೂ ಉದಯೋನ್ಮುಖ ಸಾಹಿತ್ಯ) ಆರ್.ಎಲ್ ಅನಂತರಾಮಯ್ಯ (ಕನ್ನಡ ಪ್ರಕಟಣೆಗಳು) ಎಚ್. ಎಲ್. ನಾಗೇಗೌಡ (ಕನ್ನಡ ಹಾಗೂ ಜನಪದ ಸಾಹಿತ್ಯ ಮತ್ತು ಕಲೆಗಳು) ಎಚ್.ವಿ.ಶ್ರೀರಂಗರಾಜು (ಕನ್ನಡ ಮತ್ತು ಪಠ್ಯಪುಸ್ತಕಗಳು) ಜೆ.ಆರ್.ಲಕ್ಷ್ಮಣರಾವ್ (ಕನ್ನಡ ಮತ್ತು ವಿಜ್ಞಾನ) ಡಾ|| ಎಂ. ಚಿದಾನಂದ ಮೂರ್ತಿ (ಪ್ರಾಚ್ಯ ವಸ್ತುಸಂಶೋಧನೆ ಮತ್ತು ಸಂರಕ್ಷಣೆ ಎಚ್. ಎಸ್. ಕೃಷ್ಣಸ್ವಾಮಿ ಅಯ್ಯಂಗಾರ್ (ಕನ್ನಡ ಮತ್ತು ಮಾನವಿಕ ಶಾಸ್ತ್ರಗಳು) ಡಾ. ಎಚ್. ಕೆ. ರಂಗನಾಥ್ (ನಾಟಕ ಮತ್ತು ಚಲನ ಚಿತ್ರ) ಎಸ್. ಕೆ. ರಾಮಚಂದ್ರರಾವ್ (ಕನ್ನಡ ಸಂಗೀತ ಮತ್ತು ಕಲೆಗಳು) ಹಿ. ಮ ನಾಗಯ್ಯ (ಕನ್ನಡ ಮತ್ತು ಪತ್ರಿಕೆಗಳು) ಅವರು ಭಾಗವಹಿಸಿದ್ದರು.

ಭಾರತದ ವಿವಿಧ ಭಾಷಾ ಸಾಹಿತ್ಯ ಅಕಾಡೆಮಿ ಅಧ್ಯಕ್ಷರು ಮತ್ತು ಕಾರ್ಯದರ್ಶಿಗಳ ಸಭೆ ದಿನಾಂಕ 27 ರಂದು ಡಾ|| ಕೆ. ಆರ್. ಶ್ರೀನಿವಾಸ ಅಯ್ಯಂಗಾರ್ ಅವರು ಅಧ್ಯಕ್ಷತೆಯಲ್ಲಿ ನಡೆಯಿತು.

ಉತ್ತರ ಪ್ರದೇಶದ ಮಾಜಿ ರಾಜ್ಯಪಾಲರಾದ ಡಾ|| ಬಿ. ಗೋಪಾಲರೆಡ್ಡಿ ಅವರು ಸಭೆಯನ್ನು ಉದ್ಘಾಟಿಸಿದರು.

'ಭಾರತದ ಭಾಷಾ ಬಾಂಧವ್ಯ ಮತ್ತು ಅಭಿವೃಧಾ" ಎಂಬ ವಿಷಯವಾಗಿ ಅಸ್ಸಾಮಿ, ಬಂಗಾಳಿ, ಇಂಗ್ಲೀಷ್, ಗುಜರಾತಿ, ಹಿಂದಿ, ಕನ್ನಡ, ಕಾಶ್ಮೀರಿ, ಕೊಂಕಣಿ, ಮೈಥಿಲಿ, ಮಲಯಾಳಂ, ಮಣಿಪುರಿ, ಮರಾಠಿ, ಒರಿಯಾ, ಪಂಜಾಬಿ, ರಾಜಸ್ಥಾನಿ, ಸಿಂಧಿ, ಸಂಸ್ಕೃತ, ಉರ್ದು, ಅಕಾಡೆಮಿಗಳಿಂದ ಬಂದ ಪ್ರತಿನಿಧಿಗಳು ಮಾತನಾಡಿದರು.

ಪ್ರತಿನಿಧಿಗಳಿಗೆ ಸ್ವಾಗತ ಕೋರಿದ ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷ ಶ್ರೀ ಜಿ. ನಾರಾಯಣ ಅವರು ರಾಷ್ಟ್ರದ 120 ಸಾಹಿತ್ಯ ಸಂಸ್ಥೆಗಳಿಗೆ ಮತ್ತು ಸಾಹಿತ್ಯ ಅಕಾಡಮಿಗಳಿಗೆ ಆಹ್ವಾನ ನೀಡಿದ್ದು ಇದರಲ್ಲಿ ಸುಮಾರು ಅರ್ಧದಷ್ಟು ಸಂಸ್ಥೆಗಳು ಭಾಗವಹಿಸಲು ಒಪ್ಪಿದ್ದವು. ಈಗ 19 ರಾಜ್ಯ ಅಕಾಡಮಿಗಳು ಮತ್ತು ಕೇಂದ್ರ ಸಾಹಿತ್ಯ ಅಕಾಡಮಿಗಳು ಸೇರಿದಂತೆ 45 ಸಂಸ್ಥೆಗಳು ಭಾಗವಹಿಸಿವೆ ಎಂದರು.

ಸಂಜೆ ನಡೆದ ಮತ್ತೊಂದು ಮುಖ್ಯವಾದ ಕಾರ್ಯಕ್ರಮ 'ಜ್ಞಾನಪೀಠ ಪ್ರಶಸ್ತಿ ವಿಜೇತರಿಗೆ ಸನ್ಮಾನ ಸಮಾರಂಭಾ, ಬಿಹಾರದ ಮಾಜಿ ರಾಜ್ಯಪಾಲರಾದ ಡಾ. ರಂಗನಾಥ ರಾಮಚಂದ್ರ ದಿವಾಕರ ಅವರ ಅಧ್ಯಕ್ಷತೆಯಲ್ಲಿ ಪ್ರೊ. ಉಮಾಶಂಕರ್‌ಜೋಶಿ, ಡಾ. ದ ರಾ. ಬೇಂದ್ರೆ ಡಾ. ಪಿ ವಿ ಅಖಿಲಾಂಡನ್ ಶ್ರೀ ಗೋಪೀನಾಥ ಮಾಹಂತಿ ಗೌರವವನ್ನು ಸ್ವೀಕರಿಸಿದರು. ಸನ್ಮಾನಿತರಿಗೆ ಮೈಸೂರು ಮಲ್ಲಿಗೆ ಹಾರ ತೊಡಿಸಿ ಶಾಲು ಹೊದಿಸಿ ಫಲತಾಂಬೂಲ ಸಹಿತ ನೆನಪು ಫಲಕ ನೀಡಿ ಗೌರವ ಸಲ್ಲಿಸಿದಾಗ ತುಂಬಿದ ಸಭೆ ಹರ್ಷೋದ್ಗಾರ ಮಾಡಿತು .ಪ್ರೊ ಹೆಚ್. ವಿ. ರಾಮಕೃಷ್ಣ ಸನ್ಮಾನಿತರ ಪರಿಚಯ ಮಾಡಿಕೊಟ್ಟರು. —

# ಎನ್ನಯ್ಯನ ಮಹಿಮೆ

"ಶಿವಿ"

ಶ್ರೀ ಸಿದ್ಧಗಂಗಾ ಕ್ಷೇತ್ರವಿಹಾರ
ಪಾಪರಹಿತ ಮೋಹನಾಂಗ ಮಹೇಶ
ಸಿದ್ಧಗಂಗಾವಾಸ ಸಿದ್ಧಲಿಂಗೇಶ ನಮೋ ನಮೋ ||೧||

ಶದ್ಧಭಾವದಿ ನೆನೆಯುತಲಿರುವೇ
ಶ್ರದ್ಧೆಯಿಂದಲಿ ಪೂಜೆಯಗೈವೆ
ಬುದ್ಧಿಯಲಿ ನಲಿಯೆ ಸಕಲ ಸಂಪದವೀವೆ ||೨||

ನೀನೊಲಿಯೆ ಎಲ್ಲಾ ತಾನಾಗಿ ಒಲಿವುದೈ
ನಿನಗೊಲ್ಲದ ಪೂಜೆ ಯಾರಿಗೂ ವಲ್ಲದೈ
ಬಲ್ಲ ಮನುಕುಲಕೆ ನೀ ಮುತ್ತು ಮಾಣಿಕವೈ ||೩||

ಜ್ಞಾನ ಭಕ್ತಿಯನಿತ್ತು ಪೊರೆಯೆ ನಾ ಪುನೀತನೈ
ನಿನ್ನಪಾದದಿ ಎಲ್ಲ ದೈವನ ವಾಸವೈ
ನಿನ್ನ ಗಂಗೆ ಪರಮ ಪಾವನ ಪೂಜ್ಯವೈ ||೪||

ಪಡೆಯಲ್ಕೆ ನಿನ್ನ ಬಲದೊಲುಮೆ
ಹಾಡಿ ಪಾಡುವ ನಾ ಧನ್ಯ ನಿನ್ನ ಮಹಿಮೆ
ಓ ಎನ್ನ ಸ್ವಾಮಿ ಸಲಹೈ ಸದಾ ||೫|| —

# ರಂಗವಲ್ಲಿ

—ಟಿ. ಚಂದ್ರರಾಜ ಶೆಟ್ಟಿ

ಮನಸ್ಸಿಗೆ ಸುಖ ಶಾಂತಿಗಳನ್ನುಂಟು ಮಾಡ ಬಲ್ಲ ಗೃಹ ಸೌಂದರ್ಯವರ್ಧಕ ಸಾಧನ ರಂಗೋಲಿ. ಇದೊಂದು ಉತ್ತಮ ಕಲೆ.

ಪೂರ್ವಕಾಲದಿಂದಲೂ ಭಾರತೀಯ ಸಂಸ್ಕೃತಿಯು ಜಗತ್ತಿಗೆ ಆದರ್ಶವಾಗಿದೆ. ದೈವ ದೇವರುಗಳ ಕಲ್ಪನೆ, ಶಿಷ್ಟ ಸಂಪ್ರದಾಯದ ರೀತಿ ನೀತಿಗಳು ಮೊದಲಾದವು ಅನ್ಯದೇಶೀಯರ ಸಂಪ್ರದಾಯಗಳಿಂದ ಬೇರೆಯಾಗಿರುವುದು ಮಾತ್ರವಲ್ಲ, ದಾನವನಂತಿರುವ ಮಾನವನನ್ನು ದೇವನನ್ನಾಗಿಸುವ ಕಟ್ಟುಕಟ್ಟಳೆಗಳು ಹಿಂದೂ ಸಂಪ್ರದಾಯಗಳಲ್ಲಿವೆ. ಮನ ಬಂದಂತೆ ವರ್ತಿಸಿ, ತಮ್ಮ ಜೀವನದಲ್ಲಿ ಶಾಂತಿಯನ್ನು ಕಾಣದ ಅನ್ಯದೇಶೀಯರು ಶಾಂತಿಗಾಗಿ ಭಾರತದತ್ತ ನೋಡತೊಡಗಿರುವುದು ಆಶ್ಚರ್ಯವಲ್ಲ.

ಅನಾದಿ ಕಾಲದಿಂದ ಮಾನವಂತನಾದ ಮಾನವನನ್ನು ರೂಪಿಸಿದ ಶ್ರೇಯಸ್ಸು ಭಾರತೀಯ ಧರ್ಮಗಳಲ್ಲಿದೆ. ದೇವರ ಕಲ್ಪನೆ, ದೇವರ ಪ್ರಾರ್ಥನೆ ಉಪಾಸನೆ ಮೊದಲಾದವು ಹಿಂದೂ ಸಂಸ್ಕೃತಿಯಲ್ಲಿ ಕಾಣಿಸುವಷ್ಟು ಸುಂದರವಾಗಿ, ಜಗತ್ತಿನ ಬೇರಾವ ಮತ ಧರ್ಮಗಳಲ್ಲೂ ಕಾಣಿಸುವುದಿಲ್ಲ.

ಎಲ್ಲಿ ಸೌಂದರ್ಯವಿದೆಯೋ ಅಲ್ಲಿ ಮನಶ್ಶಾಂತಿಯಿದೆ; ಎಲ್ಲಿ ಮನಶ್ಶಾಂತಿಯಿದೆಯೋ ಅಲ್ಲಿ ಸುಖ ಶಾಂತಿಗಳಿವೆ. ಅಶಾಂತಿಯಿಂದ ಕೂಡಿದ ಮನಸ್ಸು ಸುಖ ಶಾಂತಿಯನ್ನು ಕೊಡಲಾರದು. ಆದುದರಿಂದಲೇ ಹಿರಿಯರು "ಚಿಂತೆಯೇ ಮುಪ್ಪು; ಸಂತೋಷವೇ ಯೌವನ" ಎಂಬ ನಾಣ್ಣುಡಿಯನ್ನು ಹೊಸೆದಿದ್ದಾರೆ. ಶಾಂತವಾದ ಮನಸ್ಸಿದ್ದಲ್ಲಿ ಆರೋಗ್ಯವೂ, ಆರೋಗ್ಯವಿದ್ದಲ್ಲಿ ಸುಖವೂ ಇರುವುದು ಖಂಡಿತವೆಂಬ ಮಾತನ್ನು ಯಾರೂ ಅಲ್ಲಗಳೆಯಲಾರರು.

ಮನಸ್ಸಿಗೆ ಸುಖ-ಶಾಂತಿಯನ್ನು ನೀಡಬಲ್ಲ ಗೃಹ ಸೌಂದರ್ಯದ ಸಾಧನಗಳಲ್ಲಿ ರಂಗವಲ್ಲಿಗೆ ಮೊದಲನೆಯ ಸ್ಥಾನವನ್ನು ಕೊಡಬೇಕಾಗುತ್ತದೆ. ಚಿತ್ರವಿಚಿತ್ರವಾದ ಬಣ್ಣ ಮತ್ತು ವಿನ್ಯಾಸ (Design )ಗಳಿಂದೊಪ್ಪುವ ರಂಗವಲ್ಲಿ ಅಥವಾ ರಂಗೋಲೆಯನ್ನು ಬಿಡಿಸಲು ಚಿತ್ರಕಲೆಯಲ್ಲಿ ಪಾರಂಗತರಾದವರೇ ಆಗಬೇಕಾಗಿಲ್ಲ. ಸಮದೂರದ ಚುಕ್ಕೆಗಳನ್ನಿಟ್ಟು ಅವುಗಳ ಮಧ್ಯೆ ಬೇಕಾದಂಥ ಚಿತ್ರಗಳನ್ನು ಸುಲಭವಾಗಿ ಬರೆಯಬಹುದು.

ರಂಗವಲ್ಲಿಯು ಶುಭ ಸೂಚಕ. ಮನಸ್ಸಿಗೆ ಮತ್ತು ಮನೆಗೆ ಸೌಂದರ್ಯ ಮತ್ತು ಶಾಂತಿಯನ್ನು ನೀಡಬಲ್ಲ ಬಹು ಸಲಭವಾದ ಸಾಧನ. ಈ ಕಲೆಯು ಇಂದು ನಿನ್ನೆಯದಲ್ಲ. ಕ್ರಿ. ಪೂ. ೬೫೦ ರಲ್ಲಿಯೇ ವಾತ್ಸಾಯನನು ಈ ಕಲೆಯ ಬಗ್ಗೆ ಉಲ್ಲೇಖಿಸಿದ್ದಾನೆ. ಭಾರತದ ಒಂದೊಂದು ಭಾಗದಲ್ಲಿ ಇದಕ್ಕೆ ಒಂದೊಂದು ಹೆಸರಿದೆ. ಗುಜರಾಥಿಗಳು 'ಸಕೀಯೂ' ಎಂದೂ, ಬಂಗಾಲಿಗಳು 'ಅಲ್ಪೋನಾ' ಎಂದೂ, ದಕ್ಷಿಣ ಭಾರತೀಯರು 'ಕೋಲಂ' ಎಂದೂ ಕರೆಯುವ ಈ ಕಲೆಯು ಭಾರತೀಯ ಸಂಸ್ಕೃತಿಯ ಒಂದಂಗವಾಗಿ ಜನಮನ ರಂಜಿಸುವ ಒಂದು ಸಾಧನವಾಗಿದೆ.

ರಂಗವಲ್ಲಿಯನ್ನು ಹಬ್ಬ ಹರಿದಿನಗಳಲ್ಲೂ, ಉತ್ಸವ ವಿವಾಹ ಸಮಾರಂಭಗಳಲ್ಲೂ, ವಿಶೇಷ ರೀತಿಯಿಂದ ಬಿಡಿಸುವ ಸಂಪ್ರದಾಯವು ಹಿಂದಿನಿಂದಲೂ ನಡೆದು ಬಂದಿದೆ. ವಿಶೇಷ ಸಮಾರಂಭಗಳಲ್ಲಿ ಆಯಾ ಸಮಾರಂಭಕ್ಕೊಪ್ಪುವಂತೆ, ವಿಶೇಷ ತರದ ರಂಗವಲ್ಲಿಗಳನ್ನಿಟ್ಟು ಶೃಂಗರಿಸುತ್ತಾರೆ. ಉದಾಹರಣೆಗಾಗಿ ಕೃಷ್ಣಾಷ್ಟಮಿಯಂದು ಬಾಲಕೃಷ್ಣನಿಗೆ ಸಂಬಂಧಿಸಿದ ಚಿತ್ರಗಳನ್ನೂ, ಗಣೇಶ ಹಬ್ಬದ ಸಮಯ, ಗಣೇಶನ ಚಿತ್ರದ ರಂಗವಲ್ಲಿಗಳನ್ನೂ ಬಿಡಿಸುತ್ತಿರುವುದನ್ನು ಕಾಣಬಹುದು.

ರಂಗವಲ್ಲಿಯು ಹೆಣ್ಣು ಮಕ್ಕಳ ಕಲೆ. ಉಡುಪಿಯ ಬಾಯಿರಿಯವರು 'ಚಿತ್ರ ಕುಟೀರ' ಎಂಬ ತಮ್ಮ ಮನೆಯ ಹೆಸರಿನಿಂದ ಸುಧಾ ಪತ್ರಿಕೆಯಲ್ಲಿ ಆಗಾಗ ಪ್ರಕಟಿಸುತ್ತಿರುವ ಸುಂದರವಾದ ರಂಗವಲ್ಲಿಯ ಚಿತ್ರಗಳನ್ನು ಮೆಚ್ಚದವರಾರು ? ಬಾಯಿರಿಯವರು ಪ್ರಸಿದ್ಧ ಚಿತ್ರಗಾರರು ಮಾತ್ರವಲ್ಲ, ಅವರು ಚಿತ್ರಕಲೆಯ ಬಗೆ ನಾಲ್ಕಾರು ಪುಸ್ತಕಗಳನ್ನು ಬರೆದಿರುವುದರ ಜತೆಗೆ ನಾಲ್ಕು ಭಾಗಗಳಲ್ಲಿ ರಂಗವಲ್ಲಿಯ ಚಿತ್ರಗಳ ಪುಸ್ತಕಗಳನ್ನು ಪ್ರಕಟಿಸಿ, ಆ ಕಲಾಸಕ್ತರಿಗೆ ಮಹದುಪಕಾರವನ್ನು ಮಾಡಿರುತ್ತಾರೆ.

—

(16 ನೇ ಪುಟದಿಂದ)

" ಪ್ರಭು, ನಾ ಸಣ್ಣವ ಅಷ್ಟೆಲ್ಲ. ತಿಳಿಯೂದಿಲ್ಲ. ದೇವರ ಧ್ಯಾನ ಮುಖ್ಯ ಅಂತಿರತಾರ. ಅಷ್ಟs ನಾ ಕೇಳ್ದ್ದು "

ತಕ್ಷಣ ರಾಜನು ತನ್ನ ವಿಶ್ವಾಸಪಾತ್ರ ಸೇವಕನಿಗೆ ನುಡಿದ-"ನೀ ಅರಮನೆಗೆ ಹೋಗು ರಾಜ್ಯದಾಡಳಿತ ಮಂತ್ರಿಗಳಿಗೆ ನೋಡಿಕೊಳ್ಳಲಿಕ್ಕೆ ಹೇಳು,"

ಹೀಗೆಂದು ಅರಸು ನಗರದಿಂದ ಅಡವಿಯೆಡೆಗೆ ನಡೆದ.

ಅಂದು ಸೋಮವಾರ. ಅದೇ ಹುಲ್ಲು ಕುಯ್ಯುವವನು ಗಿಡವಡಿಯಲ್ಲಿ ಕುಳಿತು ದೇವತೆಯಿಂದ ಬರುವ ತನ್ನ ಆಹಾರದ ದಾರಿ ಕಾಯುತ್ತಿದ್ದನು. ತನ್ನ ಆಹಾರದಲ್ಲಿ ಪಾಲು ಬೇಡಿಯಾನು ಎಂಬ ಸಂಶಯದಿಂದ ಇನ್ನೊಂದು ಗಿಡದೆಡೆಗೆ ಹೋಗೆಂದು ಬಂದ ರಾಜನಿಗೆ ಹೇಳಿದನು.

ದೊರೆ ಸಂತೋಷದಿಂದ ಇನ್ನೊಂದು ಗಿಡದ ಆಶ್ರಯ ಪಡೆದನು. ಈಶಧ್ಯಾನದಲ್ಲಿ ತತ್ಪರನಾದನು.

ಸರಿಯಾದ ವೇಳೆಗೆ ದೇವದೂತ ಬಂದು ಹುಲ್ಲು ಕೊಯ್ಯುವವನಿಗೆ ರೊಟ್ಟಿ, ನೀರನ್ನೂ, ರಾಜನಿಗೆ ಬಂಗಾರದ ತಟ್ಟೆಯಲ್ಲಿ ಪಕ್ವಾನ್ನಗಳನ್ನು ತಂದು ಕೊಟ್ಟನು. ಈ ಭೇದಭಾವವನ್ನು ಕಂಡು ಹುಲ್ಲು ಕೊಯ್ಯುವವನಿಗೆ ಸಿಟ್ಟು ಬಂದಿತು. ಅಸೂಯೆಯಿಂದ ದೇವತೆಯನ್ನು ಕೇಳಿದ–"ಸುಮಾರು ತಿಂಗಳಾಯಿತು ದೇವರ ಧ್ಯಾನದಾಗ ನಾ ಮಗ್ನ ಆಗೇನಿ. ನನಗೆ ರೊಟ್ಟಿ -ನೀರು ಅಷ್ಟs ಇವಗ ಪಕ್ವಾನ್ನ! ನೋಡಿದರ ಈಗ ಬಂದಾನ! ಮತ್ತ ಏನೂ ಬೇಡಿಲ್ಲ. ಎಲ್ಲಿಯ ನ್ಯಾಯ ಇದು ಸ್ವರ್ಗಲೋಕದ್ದು?"

" ಅವನ ತ್ಯಾಗ ಎಂಥಾದ್ದು ನಿನಗೆ ಗೊತ್ತಿಲ್ಲ, ತಮ್ಮಾ; ನೀ ತಪಸ್ಸು ಮಾಡಲಿಕ್ಕೆ ಹತ್ತಿ ತಿಂಗಳಾಯಿತು ಖರೆ. ಆದರ ಇನ್ನೂ ನಿನ್ನ ಮನೋವಿಕಾರ ಹೋಗಿಲ್ಲ. ಅದಕ ನೀ ಮೊದಲಿನ ಕೆಲಸಕ್ಕs ತೊಡಗಬೇಕು. ಅಂತ ದೇವರ ಆಜ್ಞಾ "

ಇಷ್ಟು ನುಡಿದ ದೇವ ದೂತನು ಅದೃಶ್ಯನಾದನು.—

---

(20 ನೇ ಪುಟದಿಂದ)

ಅವಳ ಆಗಿನ ಸ್ಥಿತಿ ಬಡವನನ್ನು ಕಂಡರೆ ಬಿಲ್ಪತ್ರೆಯೂ ಬುಸ್ಸೆಂದಿತು! ಎಂದ ಹಾಗಾಯಿತು. ಹೊಟ್ಟೆಗೆ ಅನ್ನವಿಲ್ಲದೆ ತಲೆ ಸುತ್ತುತ್ತಿದ್ದರೂ 'ಬಡವನ ಕೋಪ ದವಡೆಗೆ ಮೂಲ" ಎಂಬ ಹಿರಿಯರ ಅನುಭವದ ವಾಣಿಯ ಸತ್ಯವನ್ನು ಕಂಡುಕೊಂಡ ಅವಳು ಮರು ಮಾತನಾಡದೆ ತನಗೊದಗಿರುವ ದುಸ್ಥಿತಿಯ ಬಗ್ಗೆ ಶಿವನಿಗೆ ಮೊರೆಯಿಡುತ್ತ, ನವಣೆಯನ್ನು ಕುಟ್ಟುತ್ತಾ ಒನಕೆಗೆ ಕಣ್ಣೀರಿನ ಅಭಿಷೇಕ ಮಾಡುತ್ತಾಳೆ. ಕುಟ್ಟಿ ಕುಟ್ಟಿ ಕೈಯಲ್ಲಿ ಬೊಬ್ಬೆ ಎದ್ದಿದೆ. ನಿಂತು ನಿಂತು ಕಾಲು ಸೋತಿದೆ. ಎರಡು ದಿನಗಳಿಂದಲೂ ಹೊಟ್ಟೆಗೆ ಅನ್ನವಿಲ್ಲದೆ, ಅಳುವುದಕ್ಕೂ ತ್ರಾಣವಿಲ್ಲದೆ ಮೂಲೆಯಲ್ಲಿ ಬರಿ ನೆಲದ ಮೇಲೆ ಪಿಳಿ ಪಿಳಿ ಎಂದು ಕಣ್ಣು ಬಿಡುತ್ತ ಮೌನವಾಗಿ ತಾಯಿಯನ್ನೇ ನೋಡುತ್ತಿರುವ ಕಂದನನ್ನು ಕಂಡು ಅವಳಿಗೆ ಕರುಳು ಕಿತ್ತು ಬರುತ್ತದೆ. "ನನಗೆ ಕುಟ್ಟಿ ಕುಟ್ಟಿ ಸಾಕಾಯಿತು. ಅಣ್ಣಾ ಮಡದಿಯನ್ನು ಎಬ್ಬಿಸು " ಎಂದಾಗ

ಎಬ್ಬಿಸೋದ ಯಾಕೆ ನಿದ್ದೆಗೆಡಿಸೋದ್ಯಾಕೆ
ಎರಡುಬ್ಬೆ ಮಾಡಿ ತೊಳಸೀದು -ತಂಗೆವ್ವ
ಮುಂಡೆ ನೋಡೆಂದು ಮಲಗವ್ನೆ

ಎನ್ನುತ್ತಾನೆ. ಅಲ್ಲಿಯವರೆಗೂ ತಡೆದಿದ್ದ ಮೌನ ದುಃಖವಾಗಿ ಪರಿವರ್ತಿಸಿ ಕಣ್ಣೀರ ಕೋಡಿ ಹರಿಯುತ್ತದೆ. ಮನದಲ್ಲೇ ಅಣ್ಣನಿಗೆ ಸುಖವಾಗಿ ಬಾಳು ಎಂದು ಹರಸಿ, ಮರು ಮಾತನಾಡದೆ ಊರ ಪಕ್ಕದಲ್ಲೇ ಇದ್ದ ಪರ್ವತದ ಕಡೆ ನಡೆಯುತ್ತಾಳೆ. ದಾರಿಯಲ್ಲಿ ಹೋಗುವಾಗ ಹಿಂದಿನ ದಿನಗಳು ನೆನಪಿಗೆ ಬರುತ್ತವೆ ಒಡ ಹುಟ್ಟಿದವರ ನಿರ್ಲಕ್ಷ್ಯ ಅವಳ ಬದುಕಿನಾಸೆಗೆ ಕೊಡಲಿಯನಾಗುತ್ತದೆ. ಮಗು ಬೆಳೆದು ದೊಡ್ಡವನಾಗಿ ತನ್ನ ಕಾಲಮೇಲೆ ನಿಂತುಕೊಳ್ಳುವವರೆಗಾದರೂ ಸಾಕಬಹುದೆಂಬ ಕುಡಿಯಾಸೆಯನ್ನು ಹೊತ್ತ ಅವಳಿಗೆ ಅಣ್ಣ ಮತ್ತು ತಮ್ಮನ ವರ್ತನೆ, ಮುಗಿಲಾಸೆಯಾಗುತ್ತದೆ. ರಕ್ತವನ್ನು ಹಂಚಿಕೊಂಡು ಏಳು ಜನ್ಮದವರೆಗೂ ಸಂಬಂಧ ಎಂದುಕೊಳ್ಳುವ ಒಡ ಹುಟ್ಟಿದವರು ಕಡೆಗಣ್ಣಿನಿಂದ ನೋಡಿದ ಮೇಲೆ ಇನ್ನೂ ಬದುಕಿ ಪ್ರಯೋಜನವೇನು? ಎಂದು ದುಃಖ ಪಡುತ್ತಾಳೆ. ಅವಳಿಗುಂಟಾದ ದುಃಖವನ್ನು ಜನಪದ ಕವಿ :

ಕಂಚು ಮಿಂಚೀತು ಕಾಳಸ್ತ್ರ ಗುಡುಗೀತು
ಶಿವಗಂಗ್ಯಾಗ್ಯೋಳು ಹನಿ ಬಿದ್ದು –ಪರ್ವತದ
ಗಿರಿ ಮ್ಯಾಲೆ ಕೋಡಿ ಹರಿಯೀತು

ಎಂದು ವರ್ಣಿಸಿದ್ದಾನೆ. ಶಿವನಲ್ಲಿ ಮೊರೆಯಿಡುತ್ತಾ, ಬಡತನದ ಬವಣೆ ಇನ್ನು ಸಾಕು, ತನ್ನ ಶತ್ರುವಿಗೂ ಇಂಥ ಸ್ಥಿತಿ ಬಾರದಿರಲಿ ಎಂದು ಬೇಡಿಕೊಂಡು ಮಗುವಿನೊಂದಿಗೆ ಕೋಡುಗಲ್ಲಿನ ಮೇಲಿನಿಂದ ಬಿದ್ದು ಮಣ್ಣಲ್ಲಿ ಮಣ್ಣಾಗಿ ಬೆರೆಯುತ್ತಾಳೆ ಸಮಾಜಕ್ಕೆ ಬೇಡವಾದ ಈ ಹೆಣ್ಣನ್ನು ಭೂಮಿತಾಯಿ ತನ್ನಲ್ಲಿ ಅಡಗಿಸಿ ಕೊಳ್ಳುತ್ತಾಳೆ —

# ನಿಮಗೆ ಯಾವುದು ಸೂಕ್ತ? ಆಯ್ದುಕೊಳ್ಳಿ! ಆರಂಭಿಸಿರಿ!!

ಸುಪ್ರಸಿದ್ಧ ಸುಕ್ಷೇತ್ರ ಸಿದ್ಧಗಂಗಾ. ಇಲ್ಲಿ ಎಡೆಬಿಡದೆ ನಡೆಯುತ್ತಿರುವ ತ್ರಿವಿಧ ದಾಸೋಹಗಳು ಎಲ್ಲೆಲ್ಲೂ ಜನಜನಿತ. ಸುಮಾರು ದಶಕಗಳ ಸಾರ್ವಜನಿಕ ಸೇವೆ ಎಲ್ಲರನ್ನೂ ಆಕರ್ಷಿಸಿದೆ; ಅವರ ಮೆಚ್ಚುಗೆಯನ್ನು ಪಡೆದಿದೆ.

ಮೆಚ್ಚಿದ ಮಹನೀಯರು ನಿಂತು ಬೆಂಬಲಿಸುತ್ತಿದ್ದಾರೆ. ಕೊಡುಗೈ ದೊರೆಗಳಾಗಿ ನೀಡುತ್ತಿದ್ದಾರೆ. ಅನೇಕರು ಅನೇಕ ವಿಧಗಳಲ್ಲಿ ಈ ಬೃಹತ್ಪ್ರಮಾಣದ ಮಹತ್ಕಾರ್ಯಕ್ಕೆ ನೆರವಾಗುತ್ತಿದ್ದಾರೆ. "**ಸಾರ್ವಜನಿಕರ ನೆರವೇ ಸಂಸ್ಥೆಯ ಮಹಾನಿಧಿ**" ಎಂಬುದಾಗಿ **ಶ್ರೀ ಗಳವರೇ** ಸಾರಿ ಸಾರಿ ಹೇಳಿದ್ದಾರೆ. ದಾನಿಗಳ ದಾನ ಪವಿತ್ರ ಪಾತ್ರತ್ವವನ್ನು ಇಲ್ಲಿ ಹೊಂದುತ್ತದೆ. ಈ ಮಹಾಶಯರುಗಳಿಗೆ '**ಸಿದ್ಧಗಂಗಾ**' ತುಂಬು ಧನ್ಯವಾದಗಳನ್ನು ಅರ್ಪಿಸುತ್ತದೆ.

**ಧಾನ್ಯ ಸಂಗ್ರಹಣೆ:**

ಪ್ರತಿವರ್ಷ ಸುಗ್ಗಿಯಲ್ಲಿ ಇಂತಿಷ್ಟು ಧಾನ್ಯ ಮುಡುಪಾಗಿಡಿ.
ನೀವು ಬಂದಾಗ ತಂದು ಅರ್ಪಿಸಿರಿ, ಅಥವಾ ಕ್ಷೇತ್ರದ ಪ್ರತಿನಿಧಿಗಳು ಬಂದಾಗ ಒಪ್ಪಿಸಿರಿ
ನೀವು ನೀಡಿದ ತೆನೆಗಳು ಕೂಡಿ ರಾಶಿಯಾಗಿ ದಾಸೋಹಕ್ಕೆ ವಿನಿಯೋಗವಾಗಲಿ.

**ಧನ ಸಹಾಯ:**

ಪ್ರತಿ ತಿಂಗಳೂ ಯಥಾಶಕ್ತಿ ನಿಮ್ಮ ಕಾಣಿಕೆ ಕಳಿಸಿರಿ
ನಿಮ್ಮ ಖಾತೆ ಇರುವ ಬ್ಯಾಂಕಿನಲ್ಲಿ ಶ್ರೀ ಕ್ಷೇತ್ರದ ಖಾತೆ ಇರುತ್ತೆ.
ಪ್ರತಿ ತಿಂಗಳೂ ನಿಮ್ಮ ಖಾತೆಯಿಂದ ಶ್ರೀಗಳವರ ಖಾತೆಗೆ ವರ್ಗಾಯಿಸಲು ಬ್ಯಾಂಕ್ ಮೇನೇಜರ್ ರವರಿಗೆ ಒಂದು ಪತ್ರ ಬರೆಯಿರಿ.
ನಿಮಗೆ ಶ್ರಮವಿಲ್ಲದೆ ನಿಮ್ಮ ಕಾಣಿಕೆ ಸಂದಾಯವಾಗುತ್ತದೆ.
ವರ್ಷಕ್ಕೊಮ್ಮೆ ನಿಮ್ಮಿಂದ ಸಂದಾಯವಾದ ಒಟ್ಟು ಕಾಣಿಕೆಯ ಬಗ್ಗೆ ಪತ್ರ ಬರುತ್ತೆ.

**ಕೂಡಿಟ್ಟು ಕಳುಹಿಸಿರಿ:**

ಒಂದೇ ಬಾರಿಗೆ ಇಂತಿಷ್ಟೆಂದು ದಾನ ನೀಡುವುದು ಹಲವರಿಗೆ ಅಸಾಧ್ಯ.
ಹಾಗಿದ್ದಲ್ಲಿ ಶ್ರೀ ಕ್ಷೇತ್ರದ ಒಂದು ಹುಂಡಿಯನ್ನು ನಿಮ್ಮ ಮನೆಯಲ್ಲಿಡಿರಿ,
ನಿತ್ಯ ಎಷ್ಟು ಸಾಧ್ಯವೋ ಅಷ್ಟನ್ನು ಹಾಕಿ ವರ್ಷಕ್ಕೊಮ್ಮೆ ಶ್ರೀ ಮಠಕ್ಕೆ ಕಳಿಸಿರಿ.

ಯಾವುದೇ ಹಣ ಕಳಿಸುವವರು, ಎಂ. ಒ, ಅಥವಾ ಬ್ಯಾಂಕ್ ಡ್ರಾಫ್ಟ್ ಮೂಲಕ
**ಶ್ರೀ ಶ್ರೀ ಶಿವಕುಮಾರಸ್ವಾಮಿಗಳು**, ಶ್ರೀ ಸಿದ್ಧಗಂಗಾಮಠ, ತುಮಕೂರು ಜಿಲ್ಲಾ–572131 ಇವರಿಗೆ
ನೇರವಾಗಿ ಕಳುಹಿಸಬೇಕು.

ಸಹಸ್ರಾರು ಬಡಮಕ್ಕಳ ಆಶ್ರಯ ಕೇಂದ್ರ "**ಶ್ರೀ ಸಿದ್ಧಗಂಗಾ**". ಇಲ್ಲಿಗೆ ನೀಡಿದ ಉದಾರ ಹೃದಯದ ನಿಮ್ಮ ದಾನ ನಿತ್ಯದಾಸೋಹಕ್ಕೆ ವಿನಿಯೋಗವಾಗುತ್ತದೆ. ನೀಡಿರಿ ನಿತ್ಯಸಂತೋಷವನ್ನು ಹೊಂದಿರಿ.

**ಭಕ್ತಮಂಡಲಿ**
ಶ್ರೀ ಸಿದ್ಧಗಂಗಾ ಕ್ಷೇತ್ರ

"SIDDAGANGA" Monthly, Sree Siddaganga Mutt. KRN Q-
Registered with the Registrar of News papers for India under No. 17139/